# ಕೊಡಗು  ಸಂಗಾತಿ

ವಾರ್ಷಿಕ ವಿಶೇಷ ಸಂಚಿಕೆ

ಸಂಪಾದಕಿ : ಪಟ್ಟಡ ಪಿ.ಶೀಲಾಮಣಿ KRNN - 240 ಏಪ್ರಿಲ್ 98





ಸಂಗಾತಿ ಓದುಗರಿಗೆ, ಜಾಹೀರಾತುದಾರರಿಗೆ, ಹಿತೈಷಿಗಳಿಗೆ ಹಾಗೂ
ಸಮಸ್ತ ಗೌಡ ಬಾಂಧವರಿಗೆ ಕೊಡಗು ಸಂಗಾತಿಯ ವಾರ್ಷಿಕೋತ್ಸವದ ಹಾರ್ದಿಕ ಶುಭಾಶಯಗಳು

## ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಯ ಮೊದಲನೇ ವರ್ಷದ ವಾರ್ಷಿಕೋತ್ಸವಕ್ಕೆ ಶುಭಾಶಯಗಳು





ಕೊಡಗು ಸಂಗಾತಿ ಪ್ರತಿಯ ಬೆಲೆ ರೂ. 25/-



॥ ಶ್ರೀ ವೇಂಕಟೇಶಾಯ ನಮಃ ॥



ಕಲ್ಯಾಣಾದ್ಭುತ ಗಾತ್ರಾಯ । ಕಾಮಿತಾರ್ಥ ಪ್ರಧಾಯಿನೇ ॥
ಶ್ರೀಮದ್ವೆಂಕಟನಾಥಾಯ । ಶ್ರೀನಿವಾಸಾಯ ಮಂಗಳಂ ॥





# ಪ್ರಾರ್ಥನೆ

ತಾಯಿ ಕಾವೇರಮ್ಮ ಕೈ ಮುಗಿದು ನಿಂದಿಹೆವು
ನಿನ್ನ ಮಕ್ಕಳು ನಾವು ಹಾಡಿ ಹರಸಮ್ಮ
ನಿನ್ನ ಮಡಿಲಲಿ ಬೆಳೆದು ವಾತ್ಸಲ್ಯ ನಿಧಿಯುಂಡು
ಬಾಳ ಬೆಳಗುವ ಪುಣ್ಯ ಕರುಣಿಸಮ್ಮ

ಅಜ್ಞಾನ ತಮನೀಗಿ ಮನದ ಕಲ್ಮಶ ತೊಳೆದು
ದಿವ್ಯತಮ ಬಾಳಿನೆಡೆ ನಮ್ಮ ನಡೆಸು
ನಿನ್ನ ಆ ಚೈತನ್ಯ ಆ ಬಾಳ ಘನತೆಯನು
ಈ ನಮ್ಮ ಬಾಳಿನಲಿ ನೀ ತುಂಬಿಸು

ನಿನ್ನ ಸಿರಿ ಬಸಿರಿನಲಿ ಲೋಕಖ್ಯಾತರು ಜನಿಸಿ
ಜಗಕೆ ಸಾರಿದರಲ್ತೆ ನಿನ್ನ ಕೀರ್ತಿ
ಮತ್ತೆ ಅದೇ ಬಸಿರಿಂದ ಬಂದವರು ನಾವಿಹೆವು
ಹರಿದು ಬಂದಿಹುದಮ್ಮ ಅವರ ಶಕ್ತಿ

ನಿನ್ನ ಈ ನೆಲದಲ್ಲಿ ನಾವುಂಡು ಬೆಳೆದಿಹೆವು
ನಿನ್ನ ಸೇವೆಯ ಮಾಡುವ ಶಕ್ತಿ ಬರಲಿ
ನಿನ್ನ ಪಾಲನೆಯಲ್ಲಿ ನಮ್ಮ ಜೀವನವರಳಿ
ಬಾಳ ಗುರಿಯನು ಸೇರುವ ಛಲವು ಬರಲಿ

ಭಯ ಭಕ್ತಿಯಲ್ಲಿ ನಿಂದು ಬಕುತಿ ರಸವನ್ನು ಹರಿಸಿ
ಏಕಭಾವದಿ ನಿನ್ನ ನಮಿಸುತಿಹೆವು
ನಿನ್ನ ಕರುಣಾಮೃತದಿ ಜೀವ ಸಾರ್ಥಕವಾಗೆ
ವಿಶ್ವಾತ್ಮದೈಕ್ಯತೆಯ ಬೇಡುತಿಹೆವು.

▲▼▲

ಕುಯಿಂತೋಡು ದಾಮೋದರ, ಸಂಪಾಜೆ





ಪಟ್ಟಡ ಪಿ. ಶೀಲಾಮಣಿ, *ಸಂಪಾದಕಿ*
ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆ, ಮೈಸೂರು
ಖಜಾಂಚಿ : ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಮೈಸೂರು



ಮಣ್ಣಂಡ್ರ ಕೆ. ತಮ್ಮಯ್ಯ, *ಮುದ್ರಕರು*
ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆ, ಮೈಸೂರು
ಸದಸ್ಯರು: ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಮೈಸೂರು



ಪಟ್ಟಡ ಮುತ್ತಣ್ಣ ಪ್ರಭಾಕರ, -*ಗೌರವ ಸಂಪಾದಕರು* ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆ, ಮೈಸೂರು
ನಿರ್ದೇಶಕರು: ಕೊಡಗು ಗೌಡ ವಿದ್ಯಾ ಸಂಘ ಮಡಿಕೇರಿ, -ನಿರ್ದೇಶಕರು: ಕೊಡಗು ಗೌಡ ಸಾಂಸ್ಕೃತಿಕ ಅಕಡೆಮಿ, ಮಡಿಕೇರಿ
ಸದಸ್ಯರು : ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಮೈಸೂರು



ಕಟ್ರತನ .ಸಿ. ಜಯರಾಂ, *ಉಪ ಸಂಪಾದಕರು,*
ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆ, ಮೈಸೂರು
ಸದಸ್ಯರು : ಅರೆಭಾಷಿಕ ಸಾಂಸ್ಕೃತಿಕ ಸಮಿತಿ, -ಮೈಸೂರು



ಹುಲಿಮನೆ ಓ. ರಮೇಶ್, *ಸಹ ಸಂಪಾದಕ*
ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆ , ಮೈಸೂರು
ಸದಸ್ಯರು: ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಮೈಸೂರು



**ತಡಿಯಪ್ಪನ ಕುಮಾರಜಯ,** *ಅಧ್ಯಕ್ಷರು,*
ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಮೈಸೂರು



**ಕು|| ಗೀತಾ ಮೋಂಟಡ್ಕ,** *ಕಾರ್ಯನಿರ್ವಾಹಕಿ,*
ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆ, ಮೈಸೂರು
ಕಾರ್ಯದರ್ಶಿ : ಕೊ. ಮತ್ತು ದ. ಕನ್ನಡ ಜಿಲ್ಲಾ ಗೌಡ
ಮಹಿಳಾ ಸಂಘಟನೆ, ಮೈಸೂರು
ಕಾರ್ಯದರ್ಶಿ : ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಮೈಸೂರು,
ನಿರ್ದೇಶಕರು : ಕೊ. ಗೌ. ಸಾ ಅ. ಮಡಿಕೇರಿ



**ಪಟ್ಟಡ ಎಲ್. ಶಿವಕುಮಾರ್,** *ವರದಿಗಾರ,*
ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆ, ಮೈಸೂರು
ಸದಸ್ಯರು : ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಮೈಸೂರು



**ಪಟ್ಟಡ ಪಿ. ದೀಪಕ್,** *ಕಛೇರಿ ನಿರ್ವಹಣೆ*
ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆ, ಮೈಸೂರು
ಸದಸ್ಯರು : ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಮೈಸೂರು



**ಬಾರಿಕೆ ನಿರಂಜನ್‌ಕುಮಾರ್,**- 15 ವರ್ಷ,
*ಭಾಗಮಂಡಲ*
ಕೊಡಗು ಸಂಗಾತಿಗೆ ಹೆಚ್ಚು ಸದಸ್ಯರನ್ನು ನೋಂದಾಯಿಸಿದವರು



*ಕೊ. ಸ. ಕಛೇರಿ ನಿರ್ವಹಕಿ*
**ಕು|| ಪಟ್ಟಡ ರಶ್ಮಿ ಉಲ್ಲಾಸ,**
ಸದಸ್ಯರು :ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಮೈಸೂರು



**ತೆಕ್ಕಡೆ ಬಿ. ಕುಮಾರ್,** ಮೂರ್ನಾಡು
ಕೊಡಗು ಸಂಗಾತಿಗೆ ಹೆಚ್ಚು ಸದಸ್ಯರನ್ನು ನೋಂದಾಯಿಸಿದವರು



**ಕಲ್ಲುಮುಟ್ಲು ಬಸಪ್ಪ,** *ಬೆಂಗಳೂರು*
ಕೊಡಗು ಸಂಗಾತಿಗೆ ಹೆಚ್ಚು ಸದಸ್ಯರನ್ನು ನೋಂದಾಯಿಸಿದವರು



**ಅಮ್ಮಾಜೀರ ಪೊನ್ನಪ್ಪನವರು,**- *ಬೆಂಗಳೂರು*
ಕೊಡಗು ಸಂಗಾತಿಗೆ ಹೆಚ್ಚು ಸದಸ್ಯರನ್ನು
ನೋಂದಾಯಿಸಿದವರು



**ಹೊಸೊಕ್ಲು ಹರಿಣಿ ಬೆಳ್ಯಪ್ಪ**
*ಕಛೇರಿ ನಿರ್ವಹಣೆ*
ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆ, ಮೈಸೂರು



**ಮಣ್ಣುಪುರ ಧರಣಿ**
*ಕಛೇರಿ ನಿರ್ವಹಣೆ*
ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆ, ಮೈಸೂರು



**ಶ್ರೀಮತಿ ಕುಂಬುಗೌಡನ ಮುತ್ತಮ್ಮ ದೇವಯ್ಯ**
ಅಧ್ಯಕ್ಷರು: ಕೊಡಗು ಮತ್ತು ದ.ಕ. ಜಿಲ್ಲಾ ಗೌಡ ಮಹಿಳಾ ಸಂಘಟನೆ, ಮೈಸೂರು



**ಕು॥ ಓಡಿಯನ ಈ. ಝಾನ್ಸಿ** *ಖಜಾಂಚಿ, ಸಹಕಾರ್ಯದರ್ಶಿ*
ಕೊಡಗು ಮತ್ತು ದ.ಕ. ಜಿಲ್ಲಾ ಗೌಡ ಮಹಿಳಾ ಸಂಘಟನೆ,
ಮೈಸೂರು, ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಮೈಸೂರು



**ಶ್ರೀಮತಿ ಚಿಟ್ಟೆಮಾಡ ಲಕ್ಷ್ಮಿ ರಘುಪತಿ,** *ಜಂಟಿಕಾರ್ಯದರ್ಶಿ,*
ಕೊಡಗು ಮತ್ತು ದ.ಕ. ಜಿಲ್ಲಾ ಗೌಡ ಮಹಿಳಾ ಸಂಘಟನೆ, ಮೈಸೂರು





ಎನ್. ಎಸ್. ದೇವಿಪ್ರಸಾದ್, ಸಂಪಾಜೆ (ಕೊಡಗು)
ಕೊಡಗು ಸಂಗಾತಿಯ ಸನ್ಮಾನಿತರು



ಪೂಜಾರಿ ಎ. ಮೊಣ್ಣಪ್ಪ, ಬೆಂಗಳೂರು
ಕೊಡಗು ಸಂಗಾತಿಯ ಸನ್ಮಾನಿತರು



ಮುಕ್ಕಾಟಿ ಸಿ. ವಾಸುದೇವ, ಮಡಿಕೇರಿ
ಮುಖ್ಯ ಅತಿಥಿಗಳು



ವಾಸು, ಮಾಜಿ ಮೇಯರ್, ಮೈಸೂರು
ಮುಖ್ಯ ಅತಿಥಿಗಳು



# ಸಂಪಾದಕೀಯ ನುಡಿ

ಭಾರತದ ಸಂಸ್ಕೃತಿ ವೈವಿಧ್ಯತೆಯಲ್ಲಿ ಏಕತೆಯಿಂದ ಕೂಡಿದ ಸಂಸ್ಕೃತಿ. ಇದು ಹಲವಾರು ಭಾಷೆಗಳು, ಹಲವಾರು ಧರ್ಮಗಳು, ಸಾವಿರಾರು ಜಾತಿಗಳಿಂದ ಕೂಡಿದ ಸಂಸ್ಕೃತಿಯಾಗಿದೆ. ಒಂದೇ ಮತದವರಾದರೂ ಆ ಮತದವರಲ್ಲಿಯೂ ಒಂದೇ ಜಾತಿಯವರಲ್ಲೂ ಸಹ, ಪ್ರದೇಶಗಳಿಗನುಗುಣವಾದ ಸಂಸ್ಕೃತಿಯನ್ನು ಹೊಂದಿದ್ದಾರೆ. ಭಾರತೀಯ ಸಂಸ್ಕೃತಿ ಮತ, ಜಾತಿಗಳ ಸಂಸ್ಕೃತಿಯ ಮೇಲೆಯೇ ಆಧಾರಿತವಾಗಿದೆ. ಜಾತಿ ಮತ-ಮತ್ತು ಭಾಷೆ ಇವು ಮೂರು ಮುಪ್ಪುರಿಗೊಂಡಂತೆ ಇವೆ. ಆದ್ದರಿಂದ ಸಂಸ್ಕೃತಿಯಿಂದ ಮತ, ಜಾತಿ, ಭಾಷೆಯನ್ನು ಬೇರ್ಪಡಿಸಲು ಸಾಧ್ಯವಿಲ್ಲ.

ಅದೇ ರೀತಿ ಗೌಡರ ಸಂಸ್ಕೃತಿಯೂ ಇದೆ. ಗೌಡರ ಜಾತಿ ಪದ್ಧತಿ ಹಾಗೂ ಭಾಷೆಗೆ ಒಂದಕ್ಕೊಂದು ಅವಿನಾಭಾವ ಸಂಬಂಧವಿದೆ. ಆದ್ದರಿಂದ ಗೌಡರ ಸಂಸ್ಕೃತಿಯನ್ನು ಕಾಪಾಡಬೇಕಾದರೆ ಅವರ ಭಾಷೆಯನ್ನು ಕಾಪಾಡುವುದು ಅವಶ್ಯವಾಗಿದೆ. ಭಾಷೆಯನ್ನು ಕಾಪಾಡಬೇಕಾದರೆ ಬರೇ ಮಾತಿನಿಂದ ಮಾತ್ರ ಸಾಧ್ಯವಿಲ್ಲ. ಆ ಭಾಷೆಯ ಬರವಣಿಗೆ ಅಭಿವೃದ್ಧಿಯಾಗ ಬೇಕು. ಆ ರೀತಿಯ ಅಭಿವೃದ್ಧಿಗೆ ಗೌಡರಾಡುವ ಅರೆ ಭಾಷೆ ಮತ್ತು ತುಳು ಭಾಷೆಯ ಸಾಹಿತ್ಯ ಬೆಳೆಯಬೇಕು. ಅರೆ ಭಾಷೆಯ ಸಾಹಿತ್ಯದ ಬೆಳವಣಿಗೆ ಅಷ್ಟೇನು ಹೆಚ್ಚಿನ ಪ್ರಗತಿ ಸಾಧಿಸಿಲ್ಲ. ಈ ವಿಷಯದಲ್ಲಿ ಬೆಂಗಳೂರಿನ ಗೌಡ ಸಮಾಜದವರು ಐದು ಸಂಚಿಕೆಗಳನ್ನು (ಪುಸ್ತಕಗಳನ್ನು), ದಕ್ಷಿಣ ಕನ್ನಡ ಮತ್ತು ಕೊಡಗು ಗೌಡ ಸಮ್ಮೇಳನ ಎರಡು ಸಂಚಿಕೆಯನ್ನು ಹೊರತಂದಿದೆ.

ಡಾ|| ಕೋಡಿ ಕುಶಾಲಪ್ಪಗೌಡರು ಅರೆ ಭಾಷೆಯ (ಗೌಡ ಕನ್ನಡದ) ಮಹಾಪ್ರಬಂಧವನ್ನು ಡಾ|| ಪುರುಷೋತ್ತಮ ಬಿಳಿಮಲೆ ಯವರು ಗೌಡ ಸಂಸ್ಕೃತಿಯ ಮಹಾ ಪ್ರಬಂಧವನ್ನು ಪ್ರಕಟಿಸಿ ಡಾಕ್ಟರೇಟ್ ಪದವಿಯನ್ನು ಪಡೆದಿರುವುದು ಸಂತೋಷದ ವಿಷಯ, ಪ್ರೊ|| ಪೂಜಾರಿ ಮೋಣಪ್ಪರವರು ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 1837 ರ ಸ್ವಾತಂತ್ರ್ಯ ಸಂಗ್ರಾಮವೆಂಬ ಕಿರುಹೊತ್ತಿಗೆಯನ್ನು ಪ್ರಕಟಿಸಿದ್ದಾರೆ. ಶ್ರೀ ಸೂದನ ಈರಪ್ಪನವರು ಅರೆಭಾಷೆಯಲ್ಲಿಯೇ ಒಂದು ಪುಸ್ತಕವನ್ನು ಪ್ರಕಟಿಸಿದ್ದಾರೆ. ಇದೊಂದು ದಿಟ್ಟ ಹೆಜ್ಜೆ. ಪ್ರಪ್ರಥಮವಾಗಿ ಅರೆಭಾಷೆಯಲ್ಲಿ ಶ್ರೀ ಹೊದ್ದೆಟ್ಟಿ ಭವಾನಿ ಶಂಕರ್, ದಿವಂಗತ ಶ್ರೀ ಕೂಡಕಂಡಿ ಪೊನ್ನಪ್ಪನವರು, ಶ್ರೀ ಕುಲ್ಲಚನ ಕಾರ್ಯಪ್ಪನವರು ಕವನ ಹಾಗೂ ಚುಟುಕುಗಳನ್ನು ಬರೆದಿದ್ದಾರೆ. ಅದರ ನಂತರ ಹಲವಾರು ಯುವಕ ಯುವತಿಯರು ಹಲವಾರು ಅರೆ ಭಾಷೆಯ ಕವನಗಳನ್ನು ರಚಿಸಿದ್ದಾರೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಈಗ ಎರಡು ವರ್ಷದ ಹಿಂದೆ ಅರೆ ಭಾಷೆಯ ಕವಿ ಸಮ್ಮೇಳನವನ್ನು ದಕ್ಷಿಣ ಕನ್ನಡ ಜಿಲ್ಲೆಯ ಗುತ್ತಿಗಾರಿನಲ್ಲಿ ನಡೆಸಲಾಯಿತು.

ಮೊತ್ತ ಮೊದಲಿನ ಗೌಡ ಸಂಸ್ಕೃತಿ ಹಾಗೂ ಗೌಡರ ಭಾಷೆಯ "ಗೌಡಧ್ವನಿ" ಎಂಬ ಉಪಯುಕ್ತ ಪತ್ರಿಕೆ ಹೊರಡಿಸಿ ಕಾರಣಾಂತರದಿಂದ ನಿಂತು ಹೋಯಿತು. "ಸೂಜಿ" ಪತ್ರಿಕೆಯು ಸಹ ಕೆಲವು ತಿಂಗಳು ಮಾತ್ರ ಪ್ರಕಟವಾಯಿತು.

ಕಳೆದ ವರ್ಷದಿಂದ "ಕೊಡಗು ಸಂಗಾತಿ" ಎಂಬ ಪತ್ರಿಕೆಯನ್ನು ಹೊರಡಿಸಿ, ಈಗ ಅದು ತನ್ನ ಮೊದಲ ವಾರ್ಷಿಕ ಮಹೋತ್ಸವವನ್ನು ಆಚರಿಸಿ ಇದೇ ಸಂದರ್ಭದಲ್ಲಿ ಈ ವಿಶೇಷ ಸಂಚಿಕೆಯನ್ನು ಬಿಡುಗಡೆ ಮಾಡುತ್ತಿದ್ದೆ.

ಈ ಪತ್ರಿಕೆಯು ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಜನರ ಭಾಷೆಯಾದ ಅರೆ ಭಾಷೆ ಮತ್ತು ಅವರ ಸಂಸ್ಕೃತಿ, ಗೌಡ ಮಹನೀಯರಿಂದ ಗೌಡರ ಚರಿತ್ರೆ, ಚುಟುಕುಗಳು, ಹಾಸ್ಯ ಲೇಖನಗಳು, ಟೀಕೆಗಳು, ವ್ಯಕ್ತಿಗತವಾದ ಪರಿಚಯಗಳಿಂದ ಕೂಡಿದ್ದು ಜನರಲ್ಲಿ ಒಗ್ಗಟ್ಟು ಸಾಧನೆಗೆ ದಾರಿಯಾಯಿತು. ಗೌಡರಲ್ಲಿ ನಡೆಯುವ ಸಾಮೂಹಿಕ ಸಭೆ ಸಮಾರಂಭಗಳು, ಯಾರು ಎಲ್ಲಿ ನಡೆಸಿದ್ದಾರೆಂಬುದನ್ನು ಸಮಾಜದ ಸದಸ್ಯರೂ ಅರಿತುಕೊಳ್ಳುವ ಒಂದು ಮಾಧ್ಯಮವಾಗಿ ಹೊರ ಹೊಮ್ಮಿದೆ.



ಪತ್ರಿಕೋದ್ಯಮದಿಂದ ಹಣಗಳಿಸುವ ದಾರಿ ಸುಗಮವಾದುದೇನಲ್ಲ. ಇದು ಅತೀ ದುಸ್ತರವಾದಕಾರ್ಯಸಾಧನೆ. ಒಂದು ಪತ್ರಿಕೆ ಬೆಳೆಯಬೇಕಾದರೆ ಅದರ ಸಂಪಾದಕೀಯ ವರ್ಗದವರ ಭಾಷಾ ಜ್ಞಾನ, ಸುದ್ದಿ ಸಂಗ್ರಹದ ರೀತಿ ಜನಸಂಪರ್ಕ ಮುಂತಾದವುಗಳ ಮೇಲೆ ನಿಂತಿದೆ. ಒಂದು ಸಮಾಜದ ಪತ್ರಿಕೆಯಾದ "ಕೊಡಗು ಸಂಗಾತಿ" ಯಂತಹ ಪತ್ರಿಕೆಗೆ ಗೌಡ ಸಮಾಜದ ಜನರೇ ಇದರ ಬೆನ್ನೆಲುಬು. ಸಮಾಜದ ಜನರು ಎಷ್ಟರ ಮಟ್ಟಿಗೆ ಶ್ರೇಷ್ಠ ಲೇಖನ, ಕವನ, ಕಥೆಗಳನ್ನು ಸಮಾಜದ ಮಹನೀಯರೇ ಬರೆಯಬೇಕಾದುದರಿಂದ ನಮ್ಮ ಸಮಾಜದ ವಿದ್ಯಾವಂತರು, ಅದರಲ್ಲೂ ಭಾಷಾ ಪಂಡಿತರು ಹೆಚ್ಚಿನ ಆಸಕ್ತಿ, ವಹಿಸಿದರೆ, ಉತ್ತಮ ಮಟ್ಟದ ಪತ್ರಿಕೆಯಾಗಿ ಹೊರ ಹೊಮ್ಮುತ್ತದೆ. ಬೇರೆ ಸಮಾಜದವರು ಈ ಪತ್ರಿಕೆಯನ್ನು ಓದಿದಾಗ ಅವರ ಭಾಷೆಯ ಹಾಗೂ ಸಂಸ್ಕೃತಿಯ ಹೋಲಿಕೆಯನ್ನು ಮಾಡಿದಾಗ ನಮ್ಮ ಈ ಪತ್ರಿಕೆಯಲ್ಲಿ ಪ್ರಕಟವಾಗುವ ಲೇಖನ, ಅಭಿಪ್ರಾಯ, ಕಥೆ ಹಾಗೂ ಕವನಗಳು ಉತ್ತಮ ಮಟ್ಟದ್ದಾಗಿದ್ದರೆ ನಮ್ಮ ಸಮಾಜದ ಜನರ ದೃಷ್ಟಿಕೋನ ಹೇಗಿದೆ ಎಂಬುದನ್ನು ಅಳೆಯುವ ಮಾಪನವಾಗುತ್ತದೆ. ಒಬ್ಬ ವ್ಯಕ್ತಿಯ ಚಿಂತನಾ ಶಕ್ತಿಯನ್ನು ಅವರು ಬರೆದ ಲೇಖನದಿಂದ ಹೇಗೆ ಅಳೆಯಬಹುದೋ, ಅದೇ ರೀತಿ ಒಂದು ಸಮಾಜದ ಪತ್ರಿಕೆಯಾದ "ಕೊಡಗು ಸಂಗಾತಿ" ಯಂತಹ ಪತ್ರಿಕೆಯೂ ಸಹ ಆ ಸಮಾಜದ ಜನರ ಯೋಚನಾ ಮಟ್ಟ, ಅವರ ಧ್ಯೇಯಧೋರಣೆಯನ್ನು ಪ್ರತಿಬಿಂಬಿಸುವಂತಹದ್ದಾಗಿರುತ್ತದೆ.

ವಿದ್ಯಾವಂತ ಯುವಕ ಯುವತಿಯರು ಈ ವಿಷಯವನ್ನು ಗಮನದಲ್ಲಿಟ್ಟು ಸಾಹಿತ್ಯಾಸಕ್ತಿಯನ್ನು ಬೆಳೆಸಿ, ತಮ್ಮ ಅಭಿಪ್ರಾಯ ಮತ್ತು ಕಲಿಯುವಿಕೆಯನ್ನು "ಸಂಗಾತಿ" ಯ ಮೂಲಕ ಪ್ರದರ್ಶಿಸಿದರೆ ತಮ್ಮ ಸಾಹಿತ್ಯಾಭಿರುಚಿಯನ್ನು ಹೆಚ್ಚಿಸಿಕೊಳ್ಳುವುದಲ್ಲದೆ, ತಮ್ಮಲ್ಲಿ ಸುಪ್ತ ಗೊಂಡಿರುವ ಚೈತನ್ಯವನ್ನು ಹೊರಗೆಡುವುದಕ್ಕೆ ಒಂದು ಸುಸಂದರ್ಭವಾಗುವುದು. "ಜೆಗಲು ಹಾರದವನು ಗಗನ ಹಾರಿಯಾನೆ" ಎಂಬ ನಾಣ್ಣುಡಿಯಂತೆ ಸಮಾಜದೊಳಗಿನ ಇಂತಹ ಪತ್ರಿಕೆಯಲ್ಲಿ ಬರೆದು ತೋರಿದ ಜಾಣ್ಮೆಯ ತಳಹದಿಯಲ್ಲಿ ವಿಶಾಲವಾದ ಪ್ರಪಂಚದ ಪತ್ರಿಕಾ ಪ್ರಪಂಚ ಹಾಗೂ ಸಾಹಿತ್ಯ ಲೋಕದಲ್ಲಿ ಈಜಾಡಲು ಕಲಿಯುವ ಒಂದು ತರಬೇತಿ ಕೇಂದ್ರವೂ ಆಗುತ್ತದೆ. ಹಾಗೂ ಸಾಹಿತ್ಯದ ಅಭಿರುಚಿಯನ್ನು ಅಭಿವೃದ್ಧಿಪಡಿಸುವ ನೆಲೆಯಾಗುತ್ತದೆ.

ವಿದ್ಯಾವಂತ ಹಿರಿಯರು, ನಿವೃತ್ತಿ ಹೊಂದಿದ ಉಪಾಧ್ಯಾಯರು ತಮ್ಮಲ್ಲಿರುವ ಪ್ರತಿಭೆಯನ್ನು ತಮ್ಮ ಲೇಖನದ ಮುಖಾಂತರ ಪ್ರಕಟಿಸಿದರೆ, ಕಿರಿಯರು ಅದರಿಂದ ಚೇತನಗೊಂಡು ಹೆಚ್ಚು ಹೆಚ್ಚು ಕಥೆ, ಕವನ, ಚರಿತ್ರೆ, ಸಂಸ್ಕೃತಿಯ ಲೇಖನಗಳನ್ನು ಪ್ರಕಟಿಸಲು ಪ್ರೋತ್ಸಾಹಿಸಿದಂತಾಗುವುದು. ಸಮಾಜದಲ್ಲಿ ಕುಂದುಕೊರತೆಗಳನ್ನು ಜನರಿಗೆ ಎತ್ತಿ ತೋರಿಸಲು ಈ ರೀತಿಯ ಪತ್ರಿಕೆಗಳು ಸಹಾಯವಾಗುತ್ತವೆ. ಸಮಾಜದಲ್ಲಿರುವ ಲೋಪ ದೋಷಗಳಿಂದಾಗಿ ಸಮಾಜಕ್ಕೆ ಹೇಗೆ ಹಾನಿ ಉಂಟುಮಾಡುತ್ತವೆ ಎಂಬುದನ್ನು ಸಾರ್ವಜನಿಕರ ಅಭಿಪ್ರಾಯವನ್ನು ಕ್ರೋಢಿಕರಿಸಲು ಸಾಧ್ಯವಾಗುತ್ತದೆ. ಒಂದು ದೇಶದ, ಒಂದು ಜನಾಂಗದ ಪ್ರಗತಿ, ಅವುಗಳ ಸಂಸ್ಕೃತಿ, ಭಾಷಾ ಸಾಹಿತ್ಯ ಹಾಗೂ ವಿಜ್ಞಾನದ ಮುನ್ನಡೆಯ ಮೇಲೆ ನಿಂತಿದೆ. ಭಾಷೆ ಹಾಗೂ ಸಂಸ್ಕೃತಿಯ ಬೆಳವಣಿಗೆ ಇಲ್ಲದೆ ವೈಜ್ಞಾನಿಕ ಬೆಳವಣಿಗೆ ಆ ಸಮಾಜ ಯಾ ದೇಶದ ಪ್ರಗತಿ ಅಷ್ಟೊಂದು ಸಮಂಜಸವಾಗಲಾರದು. ಅದು ಬರೇ ಲೌಕಿಕ ಅಭಿವೃದ್ಧಿಗೆ ದಾರಿಯಲ್ಲದೆ, ಆಧ್ಯಾತ್ಮಿಕ ಕಡೆ ನಿರ್ಲಕ್ಷ ಮನೋಭಾವನೆಯಿಂದ ಅದೊಂದು ಕೃತ್ರೀಮ ಸಮಾಜವಾಗಿ ಪರಿವರ್ತಿಸಿ ಆಧ್ಯಾತ್ಮಿಕವಲ್ಲದ ತಾಂತ್ರಿಕತೆಯುಳ್ಳ ಸಮಾಜವಾಗಿ ಈ ಹಿಂದೆ ಆಗಿ ಹೋದ ಇಟಲಿ, ಜರ್ಮನಿ, ರಷ್ಯ ದೇಶಗಳ ಪರಿಸ್ಥಿತಿಯಾಗಿ ಮಾನವೀಯತೆಗೆ ಬೆಲೆಯೇ ಇಲ್ಲದಂತಾಗುತ್ತದೆಂದು ಸಂಗಾತಿಯ ಅಭಿಪ್ರಾಯ.





## ಕೊಡಗು ಸಂಗಾತಿ ನಡೆದು ಬಂದ ದಾರಿ

ಒಂದು ಜನಾಂಗವನ್ನು ಸಂಸ್ಕಾರದಲ್ಲಿ ಕೊಂಡೊಯ್ಯುವುದು ಅದರ ಭಾಷೆ ಮತ್ತು ಸಂಸ್ಕೃತಿ, ಭಾಷೆಯ ಉಳಿವು ಸಾಹಿತ್ಯವನ್ನು ಆಧರಿಸಿರುತ್ತದೆ. ಸಾಹಿತ್ಯ ಬೆಳೆದಂತೆ ಸಂಸ್ಕೃತಿ ಅರಳುತ್ತದೆ. ಸಾಹಿತ್ಯದ ಉದಯಕ್ಕೆ ಸಾಹಿತಿಗಳ ಜನನ ಅವಶ್ಯಕ. ಸಾಹಿತಿಗಳಿಗೆ ಓದು ಅಷ್ಟೇ ಮುಖ್ಯ. ಇದರೆಲ್ಲದರ ಪೋಷಕ ಸ್ಥಾನವನ್ನು ತುಂಬುವ ಅಂಶವೇ ಪತ್ರಿಕೆ. ಇಂದಂಥೂ ಎಲೆಕ್ಟ್ರಾನಿಕ್ ಮಾಧ್ಯಮಗಳ ಯುಗ. ಪತ್ರಿಕೆಗಳ ಉಗಮ ಸುಲಭ ಸಾಧ್ಯವಲ್ಲ. ಆದರೂ ಇಂದು ಎಲ್ಲಾ ಜನಾಂಗಗಳನ್ನು ಮೇಲೆತ್ತುವ ದೃಷ್ಟಿಯಿಂದ ಪ್ರತೀ ಜನಾಂಗಗಳ ಸಂಸ್ಕೃತಿಗಳನ್ನು ಬಿಂಬಿಸುವ ಪತ್ರಿಕೆಗಳು ಎಲ್ಲಾ ಜನಾಂಗಗಳಲ್ಲೂ ಇವೆ. ಅದೇ ಪ್ರಕಾರದಲ್ಲಿ ಗೌಡ ಜನಾಂಗವನ್ನು ಪ್ರತಿಬಿಂಬಿಸುವ, ಗೌಡ ಕನ್ನಡವನ್ನು ತನ್ನ ಗರ್ಭದಲ್ಲಿ ಹೊತ್ತು ಗೌಡ ಸಂಸ್ಕೃತಿಯ ರಕ್ಷಣೆಗೆ ಹೊರಟ ವೀರ ರಥವೇ "ಕೊಡಗು ಸಂಗಾತಿ".

ಕೊಡಗು ಸಂಗಾತಿಯ ಹುಟ್ಟು 1997 ರ ಏಪ್ರಿಲ್ 9 ರ ಯುಗಾದಿಯ ಶುಭ ದಿನದಂದು ಆದರೂ, ಅದರ ಬಗೆಗಿನ ಕಲ್ಪನೆ ಬಹಳ ವರ್ಷಗಳ ಹಿಂದೆಯೇ ಕಾಡಿತ್ತು. ಇತ್ತೀಚಿನ ದಿನಗಳವರೆಗೂ 'ಗೌಡ ಕನ್ನಡ' ಭಾಷೆಯೆಂಬುದಿದೆ, ಕೊಡಗಿನಲ್ಲಿ ಗೌಡ ಜನಾಂಗವೆಂಬುದಿದೆ ಎನ್ನುವ ಸುಳಿವು ಕೂಡ ಹೊರಜಗತ್ತಿಗೆ ಇರಲಿಲ್ಲ. ಇಂದಿಗೂ ಕೂಡ ಕೊಡಗಿನಿಂದ ಹೊರಹೋಗಿ ನೆಲೆ ನಿಂತವರೆಲ್ಲ ಕೊಡವರೇ ಎಂದೆನಿಸಿಬಿಟ್ಟಿದ್ದಾರೆ. 'ಗೌಡ ಕನ್ನಡ' ವೆಂಬ ಸುಂದರ ಭಾಷೆ ಪರಕೀಯ ಅನುಕರಣೆಯ ಅಲೆಯಲ್ಲಿ ಕೊಚ್ಚಿಹೋಗಿ, ಯುವಜನತೆಯಿಂದ ತಿರಸ್ಕರಿಸಲ್ಪಟ್ಟು ಕರಾಳ ಅಧ್ಯಾಯ ತೆರೆಕಾಣದಂತೆ ತಡೆಯುವ ಛಲದ ಫಲವೇ ಈ 'ಕೊಡಗು ಸಂಗಾತಿ'.

ಇಡೀ ಜನಾಂಗವನ್ನು ಮೇಲೆತ್ತುವ ಗುರುತರ ಜವಾಬ್ದಾರಿಯನ್ನು ಹೊತ್ತ ಈ ಸಂಗಾತಿ ರಥದ ಹಾದಿ ಹಾಸುಗಂಬಳಿಯಾಗಿರಲಿಲ್ಲ. ಕಲ್ಲುಮುಳ್ಳುಗಳ ಹೆದ್ದಾರಿ ಅದರದಾಗಿತ್ತು. ಇದರ ಮೇಲೆ ಎಡರುತ್ತಾ, ತೊಡರುತ್ತಾ, ತೆವಳುತ್ತಾ ಈಗ ಒಂದು ವರ್ಷವನ್ನು ಪೂರೈಸುತ್ತಿದೆ. ಈ ಹಿಂದಿನ ಒಂದೆರಡು ಪತ್ರಿಕೆಗಳು 'ಗೌಡ' ಜನಾಂಗದಲ್ಲಿ ಹುಟ್ಟಿ ವಿಫಲತೆಯ ಹಾದಿಹಿಡಿದ ಕರಿನೆರಳಿನ ಛಾಯೆ 'ಕೊಡಗು ಸಂಗಾತಿ' ಯ ಮೇಲೂ ದಟ್ಟವಾಗಿ ಹರಡಿತ್ತು. ಇದರೊಡನೆ ಬಂಡವಾಳದ ಕೊರತೆ ತೊಡರು ಬಳ್ಳಿಯಾಗಿ ಕಾಡಿತು. ಹಲವು ಶ್ರೀಮಂತರ, ಹಣವಂತರ ಬಾಗಿಲು ತಟ್ಟಿದಾಗ ನಿರೀಕ್ಷಿತ ಫಲಕ್ಕೆ ಬದಲು, ಅನಿರೀಕ್ಷಿತ ಮೂದಲಿಕೆಯ ಮಾತುಗಳು ನಮ್ಮ ಪಾಲಾದವು. ಆದರೆ ಅದಕ್ಕೆಲ್ಲಾ ಎದೆಗುಂದದೇ ಅದನ್ನೇ ಬಂಡವಾಳ ಮಾಡಿಕೊಂಡು ಮುನ್ನಡೆದಾಗ ಮಧ್ಯಮ ಮತ್ತು ಬಡ ವರ್ಗದವರ ಆಶೀರ್ವಾದವೇ ಪತ್ರಿಕೆಗೆ ಶ್ರೀರಕ್ಷೆಯಾಯಿತು.

'ಸಂಗಾತಿ' ಜನಿಸಿದಾಗ ಅದನ್ನು ಬೇಡ ಎಂದವರಿಲ್ಲ. ಪತ್ರಿಕೆಯ ಗುಣಮಟ್ಟ, ಅದರ ಮುಖಪುಟಗಳ ಬಗ್ಗೆ ಚರ್ಚೆ ನಡೆಸಿದವರಿಲ್ಲ. ಆದರೆ ಸಹಾಯ ಹಸ್ತ ಚಾಚಿ ನಿಂತಾಗ ಬಿದ್ದ ಭಿಕ್ಷೆ ಮಾತ್ರ ಶೂನ್ಯ. ಆಗ ಸಂಗಾತಿಯ ಕಣ್ಣೆದುರಿಗೆ ಕುಬೇರನಂತೆ ಕಂಡದ್ದು, ಮಡಿಕೇರಿಯ 'ಕೊಡಗು ಗೌಡ ವಿದ್ಯಾ ಸಂಘ' ಇದರ ಶಾಖೆಯೊಂದು ಮೈಸೂರಿನಲ್ಲಿ ಇದ್ದು, ಇದರ ಮೂಲಕ 'ಸಂಗಾತಿ' ಯ ಕಛೇರಿಗಾಗಿ ಒಂದು ಕೊಠಡಿಯನ್ನು ತಾತ್ಕಾಲಿಕವಾಗಿಯಾದರೂ, ಬಾಡಿಗೆಯನ್ನು ಪಡೆದುಕೊಂಡು ಬಿಟ್ಟುಕೊಡಬೇಕೆಂದು ಅಂಗಲಾಚಿದಾಗ, ಮಡಿಕೇರಿಯ ಕೇಂದ್ರ ಕಛೇರಿಯಿಂದ ಮೊದಲು ಹಸಿರು ನಿಶಾನೆ ತೋರಿಸಿ, ಮಡಿಕೇರಿ-ಮೈಸೂರು ಅಲೆಸಿ, ಕೊನೆಗೆ ಎಷ್ಟೇ ಬೇಡಿದರೂ, ನಿರ್ದಾಕ್ಷಿಣ್ಯವಾಗಿ ನಿರ್ಲಕ್ಷಿಸಿದಾಗ 'ಕೊಡಗು ಸಂಗಾತಿ' ಸೋಲೊಪ್ಪಿಕೊಳ್ಳಲಿಲ್ಲ. ಬದಲಾಗಿ ಅದನ್ನೇ ಸವಾಲಾಗಿ ಸ್ವೀಕರಿಸಿತು. ಇಂದಿಗೂ ಸಂಗಾತಿಯು ಪ್ರತ್ಯೇಕ ಕಛೇರಿಯನ್ನು ಹೊಂದದೆ ನಿರಂತರ ಮುನ್ನಡೆಯುತ್ತಿರುವುದು ಆ ಸವಾಲಿಗೆ ಪ್ರತ್ಯಕ್ಷ ಸಾಕ್ಷಿಯಾಗಿದೆ.

ಗೌಡ ಜನಾಂಗದ ವಿಳಾಸ ದೊರೆತಂತೆಲ್ಲಾ 'ಕೊಡಗು ಸಂಗಾತಿ' ಯು ಅವರ ಮನೆಯನ್ನು ಹುಡುಕಿ ಹೊರಟಿತು. ಹೀಗೆ ಹೊರಟ ಪತ್ರಿಕೆ ಕೇವಲ ನಮ್ಮ ದೇಶದಲ್ಲಿ ಮಾತ್ರವಲ್ಲ ವಿದೇಶಕ್ಕೂ ಗೌಡ ಸಂಸ್ಕೃತಿಯನ್ನು ಹೊತ್ತು ನಡೆಯಿತು. 'ಗೌಡ ಕನ್ನಡ' ವನ್ನು ಮರೆತು ಕುಳಿತ ಯುವ ಜನತೆಯ ಜಿಗುಪ್ಸೆಯನ್ನು ದೂರಮಾಡಿ ಜನಪ್ರಿಯತೆಯನ್ನು ಗಳಿಸಿಕೊಟ್ಟಿತು. ಇದೆಲ್ಲಕ್ಕಿಂತಲೂ ಮುಖ್ಯವಾಗಿ 'ಕೊಡಗು-ಸಂಗಾತಿ' ಜನಿಸಿದ ವರ್ಷ 'ಗೌಡ' ಜನಾಂಗಕ್ಕೆ ಸುವರ್ಣ ವರ್ಷವೆನ್ನಬಹುದು. ಸಂಗಾತಿಯು ನಮ್ಮ ಜನಾಂಗದ ನ್ಯೂನ್ಯತೆಗಳನ್ನು ಎತ್ತಿ ತೋರಿಸಿ ಅದಕ್ಕೆ ಪರಿಹಾರಗಳನ್ನು ಸೂಚಿಸತೊಡಗಿದಂತೆ ಜನತೆಯ ಪ್ರತಿಸ್ಪಂದನ ಅದಕ್ಕೆ ಪೂರಕವಾಯಿತು. ಅದರ ಪರಿಣಾಮವಾಗಿಯೇ ಕೊಡಗಿನಾದ್ಯಂತ, ಅಲ್ಲದೆ ಹೊರಭಾಗಗಳಲ್ಲೂ ಗೌಡ ಸಂಘಟನೆಗಳು ಅಸ್ತಿತ್ವಕ್ಕೆ ಬಂದವು. ಮಹಿಳಾ ಸಂಘಟನೆಗಳು ಸ್ಥಾಪನೆಗೊಂಡವು. ಮೊಟ್ಟಮೊದಲಿಗೆ ಮಡಿಕೇರಿಯಲ್ಲಿ 'ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ', ಸ್ಥಾಪನೆಗೊಳ್ಳುವುದರ ಜೊತೆಗೆ, ಗೌಡ ಸಮಾಜ, ವಿದ್ಯಾ ಸಂಸ್ಥೆಗಳೂ ಜಾಗೃತಗೊಂಡು ಸಕ್ರಿಯಗೊಂಡವು. 'ಗೌಡ' ಜನಾಂಗದಲ್ಲಿ ನಡೆಯುವ ಕಾರ್ಯಕ್ರಮಗಳ ವರದಿಗಳನ್ನು ಗೌಡ ಜನಾಂಗದ ಮನೆ ಮನೆ ಮುಟ್ಟಿಸಿ ಅವರನ್ನು ಎಚ್ಚರಗೊಳಿಸುವ





ಪ್ರಯತ್ನವನ್ನು 'ಸಂಗಾತಿ' ಯು ಮಾಡುತ್ತಿದೆ.

ಪತ್ರಿಕೆಯನ್ನು ನಡೆಸುವುದು ಬಹಳ ದುಸ್ತರವಾದ ಕಾರ್ಯ, ಅದಕ್ಕೆ ಬಂಡವಾಳ ಅತ್ಯಂತ ಅಗತ್ಯ. ಕೇವಲ ಹಣವೊಂದಿದ್ದರೆ ಪತ್ರಿಕೆ ನಡೆಸಲಾಗದು. ಅದಕ್ಕೆ ಪ್ರತಿಭೆ ಮತ್ತು ಪರಿಶ್ರಮವೇ ಪ್ರೇರಕ ಶಕ್ತಿಯಾಗಿರುತ್ತದೆ. 'ಸಂಗಾತಿ' ಬಳಗದಲ್ಲಿ ಪರಿಶ್ರಮವೇ ಮುಖ್ಯಪಾತ್ರವನ್ನು ಬಿಂಬಿಸಿತು. ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ಈ ಬಳಗ ಮಳೆಯಲ್ಲಿ ನೆಂದಿತು, ಬಿಸಿಲಲ್ಲಿ ಬೆಂದಿತು. ಪತ್ರಿಕೆಯ ಜೀವಾಳ ಜಾಹೀರಾತುಗಳು. ಇದೊಂದು ಜನಾಂಗೀಯ ಪತ್ರಿಕೆಯಾದುದರಿಂದ ಇದಕ್ಕೆ ಸಿಗುತ್ತಿದ್ದ ಜಾಹೀರಾತುಗಳ ಫಲ ನಗಣ್ಯ. ಆಗ ನಮ್ಮ ಜನಾಂಗದ ಹಣವಂತರ ಬಳಿ ನಿಂತು, ಶುಭ ಕೋರುವ ಜಾಹೀರಾತುಗಳನ್ನು ನೀಡಿ ಪತ್ರಿಕೆಯ ಬೆಳವಣಿಗೆಗೆ ಸಹಕರಿಸುವಂತೆ ಬೇಡಿಕೊಂಡಾಗ, ಕೆಲವರು ಆಡಿರುವ ಮಾತುಗಳು ಇಲ್ಲಿ ಅಪ್ರಸ್ತುತವಾದರೂ, ಲೇಖನಗಳನ್ನು ಪ್ರಕಟಿಸುವುದಕ್ಕೂ, ವ್ಯಕ್ತಿಪರಿಚಯ ಸಂದರ್ಶನಗಳನ್ನು ಪ್ರಕಟಿಸುವುದಕ್ಕೂ ಹಣನೀಡಬೇಕೆಂದು ಸುಖಾಸುಮ್ಮನೆ ಅಪಪ್ರಚಾರ ನಡೆಸಿದ್ದಂತೂ ನಿಜಕ್ಕೂ ಖೇದಕರ.

ಇದೇನೇ ಸಮಸ್ಯೆಗಳಿದ್ದರೂ, ಪರಿಶ್ರಮದ ಎದುರು ಸಮಸ್ಯೆಗಳು ಧೂಳಿಪಟವಾಗುತ್ತದೆಂಬುದನ್ನು 'ಸಂಗಾತಿ' ಬಳಗ ಇದೀಗ ಧೃಡ ಪಡಿಸಿದೆ. ನಿರಂತರವಾಗಿ ಒಂದು ವರ್ಷಗಳ ಕಾಲ ಸಾಗಿ ತನ್ನ ಹುಟ್ಟುಹಬ್ಬವನ್ನು ಆಚರಿಸುತ್ತಿದೆ. ಬನ್ನಿ ಜನಾಂಗದ ಬಂಧುಗಳೇ, ನಮ್ಮ ಶ್ರೇಷ್ಠ ಪರಂಪರೆ ಸಂಸ್ಕೃತಿಯನ್ನು ಹೊತ್ತು ಸಾಗುತ್ತಿರುವ ಈ ಪವಿತ್ರ ರಥ'ದ ಹೆದ್ದಾರಿಯನ್ನು ದುರಸ್ಥಿಗೊಳಿಸೋಣ. ಆ ಮೂಲಕ ನಮ್ಮಯ ಹೆಮ್ಮೆಯ ಸಂಸ್ಕೃತಿಯ ಏಳಿಗೆಗೆ ಅಳಿಲು ಸೇವೆಯ ಸಲ್ಲಿಸಲು ಕಂಕಣ ಬದ್ಧರಾಗೋಣ.

ಜೈ ಗೌಡ ಭಾಂದವರೆ ಎನ್ನೋಣವೆ ?

☆ ಪಟ್ಟಡ ಮುತ್ತಣ್ಣ ಪ್ರಭಾಕರ

---





# "ಕೊಡಗನ್ನು ಆಳಿದ ಗಂಗರಸರು"

ಕೊಡಗು ಪ್ರಾಂತ್ಯದಲ್ಲಿ ಆಡಳಿತ ಮಾಡಿದ ತಲಕಾಡಿನ (ಗಂಗವಾಡಿ 96000 ದ) ಗಂಗರು ಒಕ್ಕಲಿಗರ ಬಣಕ್ಕೆ ಸೇರಿದವರು. (ಅರೆಭಾಷೆ ಗೌಡ ಜನಾಂಗದವರು)

ಗಂಗವಂಶವು ದಕ್ಷಿಣ ಭಾರತದಲ್ಲಿ ಸುದೀರ್ಘವಾಗಿ ಆಡಳಿತ ಮಾಡಿದ ರಾಜ ಮನೆತನ. ಮೊದಲನೆಯ ತಾಮ್ರ ಶಾಸನವು ಮಡಿಕೇರಿಯಲ್ಲಿಯೇ ದೊರಕಿದೆ. ಇದರಲ್ಲಿ ಮೂರು ಹಲಗೆಗಳಲ್ಲಿರುತ್ತವೆ. ಈ ಶಾಸನ ಉಂಗುರ ಮತ್ತು ಗಜ ಲಾಂಛನಗಳಿಂದ ಕೂಡಿದೆ. ಇದನ್ನು ಗ್ರೇಟರ್ ಎಂಬುವನು 'ಬರ್ಜೆಸ್ ಎಂಬುವರ ಗಮನಕ್ಕೆ ತಂದ ಈ ಶಾಸನವು ಸಂಸ್ಕೃತದಲ್ಲೂ, ನಂತರ ಕನ್ನಡದಲ್ಲಿಯೂ ಮತ್ತು ಕೊನೆಯ ಭಾಗದಲ್ಲಿ ಶ್ಲೋಕಗಳಲ್ಲಿಯೂ ಇದೆ. ಈ ಶಾಸನ ಗದ್ಯ ರೂಪದಲ್ಲಿದೆ.

ಇದು ಸ್ವಿಟ್ಜರ್‌ಲ್ಯಾಂಡಿನ 'ಬ್ಯಾಸಲ್' ಎಂಬ ಸ್ಥಳದಲ್ಲಿರುವ ಲೂಥರನ ಕ್ರೈಸ್ತ ವಸ್ತುಸಂಗ್ರಹಾಲಯದಲ್ಲಿದೆ. ಇದರಲ್ಲಿ ಗಂಗರ ದೊರೆ ಕೊಂಗಣೀವರ್ಮ ಮಹಾರಾಜಾಧಿರಾಜ ಅವನೀತನಿಗೆ ಸಂಬಂಧ ಪಟ್ಟ ವಿವರಗಳಿವೆ ಎಂದು ಶ್ರೀ ಡಾ|| ಬಿ. ಲೂಯಿ ರೈಸ್‌ರವರು ಬರೆದಿರುತ್ತಾರೆ. ಹಾಗೆಯೇ ಗಂಗರ ಬಗ್ಗೆ ದೊರೆತಿರುವ ತಾಮ್ರ ಶಾಸನಗಳ ಬಗ್ಗೆ ಡಾ|| ಫ್ಲೀಟ್ ಡಾ|| ನರಸಿಂಹಯ್ಯನವರು ಮತ್ತು ಡಾ|| ಆರೋಗ್ಯ ಸ್ವಾಮಿಯ ವರುಗಳ ಜೊತೆ ಸುಧೀರ್ಘ ಚರ್ಚೆ ನಡೆಸಿದ ನಂತರ ಡಾ|| ಬಿ. ಲೂಯಿ ರೈಸ್‌ರವರು ಮುಕ್ಕಾಲು ಭಾಗ ಶಾಸನಗಳು ಗಂಗರ ಬಗ್ಗೆ ವಿವರಣೆಗಳನ್ನೊಳಗೊಂಡಿವೆ. ಮೈಸೂರು ಸರಕಾರ ಹೊರಡಿಸಿರುವ ಗೆಜಿಟೀಯರ್‌ಗಳಲ್ಲಿಯೂ ಗಂಗರ ಬಗ್ಗೆ ವಿವರಣೆಗಳು ಪ್ರಕಟವಾಗಿವೆ. ಗಂಗರು ಅಯೋಧ್ಯೆಯ ರಾಜಾವಂಶಸ್ಥರು ಇಕ್ಷ್ವಾಕು ವಂಶಕ್ಕೆ ಸೇರಿದವರು. ಇವರು ಉತ್ತರದ ಕಡೆಯಿಂದ ದಕ್ಷಿಣಾಭಿಮುಖವಾಗಿ ಬಂದು ಪೆರೂರು ಎಂಬ ಗ್ರಾಮದಲ್ಲಿ ನೆಲೆಸಿ ಆ ಸ್ಥಳದಲ್ಲಿದ್ದ ಸಿಂಹ ನಂದಿ ಎಂಬ ಗುರುವಿನ ಆಶೀರ್ವಾದ ಪಡೆದು ರಾಜ್ಯ ವಿಸ್ತರಣೆ ಕಾರ್ಯವನ್ನು ಕೈಗೊಂಡು ಮೊದಲು ಕುವಲಾಲಪುರ (ಈಗಿನ ಕೋಲಾರ ಜಿಲ್ಲೆ) ಪ್ರದೇಶವನ್ನು, ನಂದೀ ದುರ್ಗ ಸೇರಿದಂತೆ ತಮ್ಮ ಕಾರ್ಯ ಕ್ಷೇತ್ರವನ್ನಾಗಿ ಮಾಡಿಕೊಂಡು ರಾಜ್ಯವನ್ನು ವಿಸ್ತರಿಸಿ ಅಲ್ಲಿ ನಿಂತರು. ಆಮೇಲೆ ಈಗಿನ ಬೆಂಗಳೂರು ಜಿಲ್ಲೆಯ ನೆಲಮಂಗಲ ತಾಲ್ಲೋಕಿನ 'ಮಣ್ಣೆ' ಪ್ರದೇಶವನ್ನು ತಮ್ಮ ಕಾರ್ಯ ಕ್ಷೇತ್ರವನ್ನಾಗಿ ಮಾಡಿಕೊಂಡರು. ಚನ್ನಪಟ್ಟಣಕ್ಕೆ ಸೇರಿದ ಮುಕುಂದ ಪಟ್ಟಣವನ್ನು ತಮ್ಮ ಕೇಂದ್ರವನ್ನಾಗಿ ಮಾಡಿ ಕೊಂಡು, ಮತ್ತೆ ರಾಜ್ಯವನ್ನು ವಿಸ್ತರಿಸಿದಂತೆ ಕಾವೇರಿ ತೀರದಲ್ಲಿದ್ದ ತಲವನ ಪುರ ಈಗಿನ ತಲಕಾಡನ್ನು ತಮ್ಮ ಮುಖ್ಯ ಕೇಂದ್ರವನ್ನಾಗಿ ಮಾಡಿಕೊಂಡು ಉಳಿಕೆ ಸ್ಥಳಗಳನ್ನು ಉಪಕೇಂದ್ರಗಳನ್ನಾಗಿ ಮಾಡಿಕೊಂಡು ತಮ್ಮ ಆಡಳಿತ ಸುಗಮವಾಗಿ ನಡೆಸಲು ಅನುಕೂಲ ಮಾಡಿಕೊಂಡರು.



ಮುಂದುವರಿದು ರಾಜ್ಯ ವಿಸ್ತರಣಾ ಕಾರ್ಯ ಕೈಗೊಂಡು ಕೊಯಮುತ್ತೂರು, ಸೇಲಂ, ಮದುರೈ, ಕೊಂಗುದೇಶ ಮತ್ತು ಚೇರಾ ಪ್ರಾಂತ್ಯ ಗಳನ್ನೊಳ ಗೊಂಡಂತೆ ರಾಜ್ಯ ವಿಸ್ತರಿಸಿದರು. ಹಾಗೆಯೇ ಕೊಡಗು ಪ್ರಾಂತ್ಯ, ಸುಳ್ಯ ಪ್ರಾಂತ್ಯ, ಐಗೂರು ಸಂಸ್ಥಾನ ಮತ್ತು ದಕ್ಷಿಣ ಕನ್ನಡ, ಉತ್ತರ ಕನ್ನಡ ಪ್ರದೇಶದವರೆಗೂ ಅಂದರೆ ಕೊಂಕಣ ತೀರ ಪ್ರದೇಶಗಳವರೆಗೂ ಹೋಗಿ ತಮ್ಮ ಅಧಿಕಾರಕ್ಕೆ ಆ ಪ್ರದೇಶಗಳನ್ನು ಒಳಪಡಿಸಿಕೊಂಡು ಅಲ್ಲಿ ತಮ್ಮ ಪ್ರತಿನಿಧಿಗಳನ್ನು ನೇಮಿಸಿ ಆ ಪ್ರದೇಶಗಳ ಅಧಿಕಾರವನ್ನು ತಮ್ಮ ಆಡಳಿತಕ್ಕೊಳಪಡಿಸಿಕೊಂಡು, ತಮ್ಮ ಕೇಂದ್ರ ಸ್ಥಳವಾದ ಗಂಗವಾಡಿ 96000 ಅಂದರೆ ತಲಕಾಡಿನೊಂದಿಗೆ ಸಂಪರ್ಕ ಇಟ್ಟುಕೊಂಡಿದ್ದರು. ಇವರು ಮುಖ್ಯವಾಗಿ, ಫಲವತ್ತಾದ ಉತ್ತಮ ನೀರಾವರಿ ಆಶ್ರಯವಿರುವ ಪ್ರದೇಶಗಳಲ್ಲಿ ಹೆಚ್ಚು ಹೆಚ್ಚಾಗಿ ನೆಲಸಿ, ವ್ಯವಸಾಯ ಪ್ರಾರಂಭಿಸಿದರು. ದೇಶದ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸಲು ಸಹಕಾರಿಯಾಗಿದ್ದರು. ದೇಶವು ಸುಭಿಕ್ಷವಾಗಿರಲು ವ್ಯವಸಾಯವೇ ಮುಖ್ಯವೆಂದು ತಿಳಿದು ದೇಶದ ಆರ್ಥಿಕ ಸ್ಥಿತಿಯು ಉತ್ತಮವಾಗಲು ಕಾರಣೀಭೂತರಾದರು.

ಕಾಲಾನಂತರದಲ್ಲಿ ಅನೇಕ ಕಷ್ಟ ನಷ್ಟಗಳನ್ನು ಅನುಭವಿಸ ಬೇಕಾಯಿತು. ಅಲ್ಲದೆ ಮುಸಲ್ಮಾನರ ದಂಗೆಯ ಪರಿಣಾಮವು ಇವರ ನೆಮ್ಮದಿಯನ್ನು ಹದಗೆಡಿಸಿತು. ಇದರಿಂದ ದಿಕ್ಕೆಟ್ಟು ಚೆಲ್ಲಾಪಿಲ್ಲಿಯಾದರು. ಎಲ್ಲೆಲ್ಲಿ ಹೋಗಿ ನೆಲೆ ನಿಂತರೋ ಅಲ್ಲಿಯೇ ಸ್ಥಳೀಯರೊಡನೆ ಹೊಂದಿಕೊಂಡು ಸಂದರ್ಭಕ್ಕೆ ತಕ್ಕ ಹಾಗೆ ಜೀವನ ನಡೆಸತೊಡಗಿದರು. ಹೀಗಾಗಿ ಕೇಂದ್ರ ಸ್ಥಾನವಾದ ತಲಕಾಡಿಗೆ, ಗಂಗವಾಡಿ 96000 ಕ್ಕೆ ಸಂಪರ್ಕ ತಪ್ಪಿತು. ಇದರ ಪರಿಣಾಮವಾಗಿ ಇವರುಗಳ ವಿಚಾರಗಳಲ್ಲಿ ಅನೇಕ ಬದಲಾವಣೆಗಳಾಯಿತು. ಆದರೆ ಅಲ್ಲೇ ಸ್ವಲ್ಪ ತಮ್ಮ ಸಂಪ್ರದಾಯದ ಆಚರಣೆಯನ್ನು ಬಿಡದೆ ಅನುಸರಿಸಿಕೊಂಡು ಬಂದಿರುತ್ತಾರೆ.

ಈ ಕಾರಣಗಳಿಂದ ಒಂದು ಕಡೆ ಜನಸಂಖ್ಯೆ ಕಡಿಮೆ ಯಾಯಿತು. ಅಭಿವೃದ್ಧಿ ಕೆಲಸಗಳು ಕುಂಠಿತವಾದವು. ವ್ಯವಸಾಯಕ್ಕೆ ಅಡಚಣೆಯಾಯಿತು. ಆದುದರಿಂದ ಅಕ್ಕಪಕ್ಕದ ಪ್ರದೇಶಗಳಾದ ಹಾಸನ, ಮೈಸೂರು, ಮಂಡ್ಯ ಪ್ರದೇಶಗಳಿಂದ ಕೆಲಸಕ್ಕಾಗಿ ಜನಗಳನ್ನು ಕರೆತಂದು ಕೆಲಸ ಕಾರ್ಯಗಳನ್ನು ಉತ್ತಮ ಪಡಿಸಿ ಜನಸಮುದಾಯಕ್ಕೆ ಅನುಕೂಲ ಮಾಡಿಕೊಟ್ಟರು. ಈ ಕಾರಣಗಳಿಂದ ಹೊರಗಿಂದ ಬಂದು ನೆಲೆಸಿದವರು ಮತ್ತು ಗಂಗರು



ಅಂದರೆ ಆಡಳಿತ ವರ್ಗದ ಮುಖ್ಯಸ್ಥರುಗಳ ವರ್ಗಕ್ಕೂ ವೈವಾಹಿಕ ಸಂಬಂಧ ಏರ್ಪಟ್ಟು ಭೇದವಿಲ್ಲದೆ ಒಂದೇ ಸಂಪ್ರಧಾಯ ಒಪ್ಪರಾಗಿ, ಒಂದೇ ಪಂಗಡದವರಂತೆ ಜೀವನ ನಡೆಸತೊಡಗಿದರು. ಈ ಕಾರಣಗಳಿಂದ ಜನರು ತಮ್ಮ ಮಾತೃ ಭಾಷೆಯಾದ ಕನ್ನಡದ ಜೊತೆಗೆ ನೆರೆಯ ಪ್ರಾಂತ್ಯಗಳ ಭಾಷೆಗಳನ್ನೂ ಬಳಸಿಕೊಂಡು, ಕಾಲಾಂತರದಲ್ಲಿ ಅದು ತನ್ನ ನೈಜತೆಯನ್ನು ಕಳೆದುಕೊಂಡು ಒಂದು ರೀತಿಯ ಕನ್ನಡವಾಯಿತು. ನಂತರ ಅದೇ ಆಡು ಭಾಷೆಯಾಗಿ, ಅದೇ ಭಾಷೆ ಎನ್ನಿಸಿಕೊಂಡು, ರೂಢಿವಾಚಕವಾಗಿ ಪ್ರಚಾರಕ್ಕೆ ಬಂದು ಈಗ ಅದು ಅರೆಭಾಷೆ ಎಂದು ಕರೆಯಲ್ಪಡುವಂತಾಗಿದೆ.

ಭಾಷೆಯ ವಿಷಯದಲ್ಲಿ ಉದಾಹರಣೆ ಸಹಿತ ವಿವರಿಸುವುದಾದರೆ ಮೊದಲನೆಯದಾಗಿ, ಅರವು ಎಂದರೆ ತಮಿಳರ ಮೂಲದಿಂದ ಬಂದವರು, ಅಂದರೆ ಕೊಂಗುನಾಡು, ಕೊಂಗಾಳ್ವರು, ಕೊಂಗುದೇಶಕ್ಕೆ ಸೇರಿದವರು, ಕೊಂಗಣೀವರ್ಮ ರಾಜಾಧಿರಾಜ ಪೆರ್ಮಾನಡಿ, ಗಂಗವಂಶ ತಿಲಕರಿಗೆ ಸಂಬಂಧಿಸಿದವರು ಎಂದು ಗೆಜೆಟೀಯರ್‌ಗಳು ಹಾಗೂ ಸಂಶೋಧನೆಗಳಿಂದ ತಿಳಿಯುತ್ತದೆ. ಈ ಜನಾಂಗದ ಮೂಲ ವಂಶಸ್ಥರು. ಈಗಲೂ ಈಗಿನ ತಲಕಾಡು ಕೋಲಾರ, ಬೆಂಗಳೂರು, ತುಮಕೂರು, [illegible] ಕೊಡಗು ಮತ್ತು ಮೈಸೂರು ಜಿಲ್ಲೆಗಳಲ್ಲಿ ಕಂಡುಬರುತ್ತಾರೆ. ಹೆಚ್ಚಿನ ಸಂಖ್ಯೆಯಲ್ಲಿ ಈಗಿನ ತಮಿಳುನಾಡಿನ ಕೊಯಮತ್ತೂರು, ಸೇಲಂ, ಮದುರೈ, ತಂಜಾವೂರು ಮತ್ತು ಊಟಿ ಜಿಲ್ಲೆಗಳಲ್ಲಿ ಕಂಡು ಬರುತ್ತಾರೆ. ಜನರು ಆಯಾ ಸ್ಥಳದ ಭಾಷೆಗಳಿಗೆ ತಕ್ಕಂತೆ ಅಳವಡಿಸಿಕೊಂಡು ಆಡುಭಾಷೆಯಾಗಿ, ತಮಗೆ ತಾವೇ ಪರಿವರ್ತಿಸಿ ಕೊಂಡಿರುತ್ತಾರೆ. ಈ ಕಾರಣಗಳಿಂದ ಈ ಭಾಗದ ಜನರನ್ನು (ಕೊಡಗು ಪ್ರಾಂತ್ಯ ಸುಳ್ಯ ಪ್ರಾಂತ್ಯ ಐಗೂರು ಪ್ರಾಂತ್ಯ), ಕನ್ನಡ ಮಾತನಾಡುವ ಜನರನ್ನು ಅರೆಭಾಷೆಯನ್ನಾಡುವವರೆಂದೂ, ಇವರ ಭಾಷೆಗೆ ಅರೆಗನ್ನಡವೆಂದು ಕರೆದಿರಬಹುದು. ಎಡನೆಯದಾಗಿ ಅರೆಭಾಷೆ ಎಂದರೆ, ಅರೆ ಎಂದರೆ ಕಲ್ಲು ಎಂದರ್ಥವಾಗುತ್ತದೆ. ಕಲ್ಲುಗಳಿಂದ ಕೂಡಿದ ಗುಡ್ಡ ಬೆಟ್ಟದ ತಗ್ಗುಪ್ರದೇಶ, ಸಣ್ಣ ಸಣ್ಣ ಗುಡ್ಡಪ್ರದೇಶವೆಂದೂ ಅರ್ಥವಾಗುತ್ತದೆ.

ಈ ಘಟ್ಟ ಕಲ್ಲುಗಳಿಂದ ಕೂಡಿದ ಪ್ರದೇಶದಲ್ಲಿ ವ್ಯವಸಾಯಗಾರರಾಗಿದ್ದುದ್ದರಿಂದ ಅವರನ್ನು ಗೌಡ ಜನರೆಂದು ಕರೆಯಬಹುದು. ನಂತರ ಮುಂದುವರಿದು ಕಸುಬನ್ನು ಆದರಿಸಿ ಒಕ್ಕಲಿಗರು ಎಂದೂ ಕರೆಯಬಹುದು. ಆದ್ದರಿಂದ ಇವರನ್ನು ಒಕ್ಕಲಿಗ ಗೌಡ ಜನಾಂಗದವರೆಂದು ಕರೆಯಲಾರಂಭಿಸಿದರು. ಇವರುಗಳು ಆಡುವ ಭಾಷೆ ಕನ್ನಡ ಆದರೆ ಅಕ್ಕ ಪಕ್ಕದ ಪ್ರದೇಶಗಳ ಭಾಷೆಗಳಾದ ತುಳು, ಮಲೆಯಾಳ, ತಮಿಳು ಭಾಷೆಗಳಿಂದ ಬೆರಕೆಯಾಯಿತು. ಕಾಲಾನಂತರದಲ್ಲಿ ಕನ್ನಡ ರೂಪಾಂತರವನ್ನು ಸ್ವಲ್ಪ ಮಟ್ಟಿಗೆ ಬದಲಿಸಿಕೊಂಡು ಅರೆಭಾಷೆಯ ರೂಪಾಂತರವನ್ನು ತಾಳಿ ಆಡುಭಾಷೆಯಾಗಿ ರೂಪಾಂತರಗೊಂಡಿತು. ಜನ ಸಮುದಾಯದವರು, ಈ ವರ್ಗದ ಜನರನ್ನು ಅರೆಭಾಷೆ ಗೌಡರು (ಒಕ್ಕಲಿಗರು) ಎಂದು ಪ್ರಚಾರವಾಯಿತು.

ವಸ್ತುಸ್ಥಿತಿಯನ್ನು ಮರೆತು ಆ ಜನಗಳೂ ಸಹ ಹೊಂದಿಕೊಂಡರು. ಈಗಲೂ ಗಡಿ ನಾಡುಗಳಲ್ಲಿ ಬೇರೆ ಬೇರೆ ವರ್ಗದ ಜನರು ಅರೆಭಾಷೆಯನ್ನಾಡುತ್ತಾರೆ. ಆದರೆ ಬೇರೆ ಭಾಷೆ ಸೇರ್ಪಡೆಯಿಂದ ಬದಲಿಸಿದೇ ಹೊರತು ಮೂಲ ಬದಲಾಗಿಲ್ಲ. ಈ ಜನಸಮುದಾಯವು ಕನ್ನಡದವರೇ ಒಕ್ಕಲಿಗರ ಬಣಕ್ಕೆ ಸೇರಿದವರೆಂದು ಪರಿಗಣಿಸಬಹುದು.

ಕೊಡಗು ಪ್ರಾಂತ್ಯವನ್ನಾಳಿದ ಗಂಗರಸರು ಅಚ್ಚ ಕನ್ನಡಿಗರಾದರೂ, ಎಲ್ಲಾ ಭಾಷೆಗಳನ್ನು ಪ್ರೀತಿಯಿಂದ ಪ್ರೋತ್ಸಾಹಿಸುತ್ತಿದ್ದರು ಇವರುಗಳು ಭಾಷಾದ್ವೇಷಿಗಳಲ್ಲ. ಈ ವಂಶದ ರಾಜಾಧಿ ರಾಜರುಗಳು ಕನ್ನಡದಲ್ಲಿ ಪಾಂಡಿತ್ಯರಿದ್ದರೂ, ಕನ್ನಡವನ್ನು ಬೆಳೆಸಿದವರು. ಗಂಗರಸರುಗಳು ಸ್ವತಃ ಗ್ರಂಥ ಕರ್ತೃಗಳಾಗಿದ್ದರು. ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ, ಭಾಷಾಂತರಿಸಿರುವ ಉದಾಹರಣೆಗಳಿವೆ. ಕೆಲವು ಗ್ರಂಥಗಳಿಗೆ ಭಾಷ್ಯಗಳನ್ನು ಬರೆದಿರುತ್ತಾರೆ ಮತ್ತು ದತ್ತಕ ಸೂತ್ರ ಗ್ರಂಥಕ್ಕೆ ವ್ಯಾಖ್ಯಾನವನ್ನು ಬರೆದಿರುತ್ತಾರೆ. ಗಂಗರ ದೊರೆಗಳು, ಪಾಳೀ, ಕನ್ನಡ, ಪ್ರಾಕೃತ ಮತ್ತು ಸಂಸ್ಕೃತ ಭಾಷಾ ಪಂಡಿತರಾಗಿದ್ದರು. ಸಾಹಿತ್ಯಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡುತ್ತಿದ್ದರು. ಗಜಾಷ್ಟಕವನ್ನು ರಚಿಸಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲಿ ಪ್ರಸಿದ್ಧ ಪಡೆದ ಹಾಗೆ. ಸಮರ ಕಲೆಯಲ್ಲೂ ಪ್ರತಿಷ್ಠಿತ ಸ್ಥಾನಗಳಿಸಿಕೊಂಡು ಕೀರ್ತಿವಂತರಾಗಿರುತ್ತಾರೆ. ಈ ರೀತಿ ಆಡಳಿತ ಮಾಡಿದ ವಂಶವು ಕಾಲಾನಂತರದಲ್ಲಿ ಕ್ಷೀಣಿಸುತ್ತಾ ಬಂದು ಸಣ್ಣ ಪುಟ್ಟ ಪಟ್ಟಣಗಳಲ್ಲಿ ವಾಸಿಸುತ್ತಾ ಕಾಲಾನಂತರ ದಲ್ಲಿ ಹೋಬಳಿ ಮತ್ತು ಗ್ರಾಮಗಳಲ್ಲಿ ಈ ವಂಶದ ಪಳೆಯುಳಿಕೆಗಳಾಗಿ ವಾಸಿಸುತ್ತಾ ಬಂದಿರುತ್ತಾರೆ. ಆದರೂ ತಮ್ಮ ಹಿಂದಿನ ವಂಶದ ಸಂಪ್ರದಾಯ ಆಚಾರ, ವಿಚಾರಗಳನ್ನು ಉಳಿಸಿಕೊಂಡು ಬಂದಿರುತ್ತಾರೆ. ಭಾಷಾ ಗೊಂದಲದಿಂದ, ಅರೆ ಭಾಷೆಗೌಡರೆಂದು ಕರೆಯಲ್ಪಟ್ಟಿರುತ್ತಾರೆ. ಇವರು ಗಂಗವಂಶದ ಗಂಗವಾಡಿ 96000ದ ಪ್ರಾಂತ್ಯಕ್ಕೆ ಸೇರಿದ ಒಕ್ಕಲಿಗರ ಬಣಕ್ಕೆ ಸೇರಿದವರು. ಇವರ ಮೂಲ ವಂಶಸ್ಥರು ತಲಕಾಡಿನಲ್ಲಿ ನೆಲಸಿ ರಾಜ್ಯ ಭಾರ ಮಾಡಿದವರು.

ಈಗ ಎಲ್ಲಾ ಒಕ್ಕಲಿಗ ಗೌಡ ಜನಾಂಗವನ್ನು ತಮ್ಮ ಮೂಲ ವಂಶಸ್ಥರನ್ನು ಪುನಃ ಜ್ಞಾಪಿಸಿಕೊಳ್ಳುವಂತೆ ಪುನರ್ ಮಿಲನ ಮಾಡಲು ಅನುಕೂಲ ಮಾಡಿಕೊಟ್ಟಿರುವ ಒಕ್ಕಲಿಗರ ಇತಿಹಾಸ ಹೊರತರಲಿರುವ ಸಂಪಾದಕ ಮಂಡಲಿಯವರಿಗೂ, ಇದರ ನೇತೃತ್ವ ವಹಿಸಿರುವ ಶ್ರೀಶ್ರೀಶ್ರೀ ಬಾಲಗಂಗಾಧರನಾಥ ಸ್ವಾಮಿಯವರ ಸಹಕಾರ ಪ್ರೋತ್ಸಾಹಗಳನ್ನು ಒಕ್ಕಲಿಗ ಗೌಡರು ಸದಾ ಕೃತಜ್ಞತೆಯಿಂದ ಸ್ಮರಿಸುತ್ತಾರೆ.

☆ **ಟಿ.ಆರ್. ಮುದ್ದೇಗೌಡ,** ಯಾದವಗಿರಿ, ಮೈಸೂರು

# ಗೌಡರು ಆರಾಧಿಸುವ ದೇವರುಗಳು

ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೆಲೆಸಿರುವ ಗೌಡರು ಶಿವ, ವಿಷ್ಣು, ಪಾರ್ವತಿ, ಲಕ್ಷ್ಮಿ, ಸರಸ್ವತಿ, ಗಣಪತಿ, ಸುಬ್ರಮಣ್ಯ, ಐಯ್ಯಪ್ಪ, ಮುಂತಾದ ದೇವತೆಗಳಲ್ಲದೆ, ಚಾಮುಂಡಿ, ಗುಳಿಗ, ಪಾಶಾಣ ಮೂರ್ತಿ ಮುಂತಾದ ಭೂತ ಆರಾಧನೆಯನ್ನು ಮಾಡುತ್ತಾರೆ. ಈ ಗೌಡರನ್ನು ಪೂರ್ತಿಯಾಗಿ ಶೈವ ಅಥವಾ ವೈಷ್ಣವ ಪಂಥದವರೆಂದು ಹೇಳಲು ಸಾಧ್ಯವಿಲ್ಲ.

ಭಾರತದಲ್ಲಿ ಹಿಂದೂಗಳೆಂದು ಕರೆಯಲ್ಪಡುವ ಆರ್ಯ, ದ್ರಾವಿಡ ಪಂಗಡಗಳ ಮಿಲನದಿಂದಾಗಿ ಉಂಟಾದ ಮತವೆಂದು ಹೇಳಬಹುದು. ಭಾರತಕ್ಕೆ ಆರ್ಯರು ಬೇರೆ ಕಡೆಯಿಂದ ವಲಸೆ ಬಂದು ಸಿಂಧೂ ನದಿಯ ಕಣಿವೆಯಲ್ಲಿ ವಾಸಿಸುತ್ತಿದ್ದ ದ್ರಾವಿಡರನ್ನು ಓಡಿಸಿ ಆ ಪ್ರಾಂತ್ಯವನ್ನು ವಶಪಡಿಸಿಕೊಂಡಿದ್ದರಿಂದ ಈಗಿನ ಪಂಜಾಬಿನ ಹಾಗೂ ಪಾಕಿಸ್ತಾನಕ್ಕೆ ಸೇರಿದ ಪಂಜಾಬನ್ನು ಆಕ್ರಮಿಸಿಕೊಂಡಂತೆ ಕಾಣುತ್ತದೆ. ಇವರು ಎತ್ತರದ ದೇಹವುಳ್ಳವರಾಗಿ, ಸುಂದರ ಮುಖಭಾವ ಇದ್ದುದರಿಂದ ಇಲ್ಲಿದ್ದ ಆರ್ಯರಲ್ಲದ ದ್ರಾವಿಡರನ್ನು (ದಸ್ಯ, ರಾಕ್ಷಸ, ವಾನರ) ಗಿಡ್ಡ ಮೂಗಿನವರೆಂದು ಹಿಯ್ಯಾಳಿಕೆಯ ಪದವನ್ನು ಉಪಯೋಗಿಸಿ ಅವರನ್ನು ತುಚ್ಛವಾಗಿ ಕಾಣುತ್ತಿದ್ದರು. ಆದರೆ ಕಾಲಾನುಕ್ರಮದಲ್ಲಿ ಸ್ನೇಹಚಾರ ಬೆಳೆದು ಆರ್ಯ ದ್ರಾವಿಡರಲ್ಲಿ ವಿವಾಹಗಳು ನಡೆದು ಈ ಎರಡೂ ಕಡೆಯವರಿಗೆ ಸಾಮಾನ್ಯವಾದ ಒಬ್ಬ ದೇವರ ಅವಶ್ಯಕತೆ ಇತ್ತು. ಶಿವನೇ ಈ ಎರಡು ಪಂಗಡಗಳ ದೇವರಾದನು. ಕಾರಣವೇನೆಂದರೆ, ಆರ್ಯರ ದೇವರುಗಳಾದ ಚಂದ್ರ ಮತ್ತು ಗಂಗೆ ಶಿವನ ತಲೆಯ ಮೇಲೂ ಹಾಗೂ ಜುಟ್ಟಿನಲ್ಲೂ, ಶಿವನಿಗೆ ಮೂರನೇ ಕಣ್ಣು ಹಣೆಯ ಮಧ್ಯದಲ್ಲಿ ಇರುವುದರಿಂದ ಅದೇ ಅಗ್ನಿ ದೇವತೆಯಾಗಿಯೂ, ಆರ್ಯರು ಪೂಜಿಸುತ್ತಿದ್ದ ಸರ್ಪ ಶಿವನ ಕತ್ತಿನಲ್ಲಿಯೂ, ಲಿಂಗ ಶಿವನ ಎದೆಯಲ್ಲಿ ತಾಳಿಯಂತೆ ತೂಗಾಡುತ್ತಿರುತ್ತಾ ಇದೆ.

ಶಿವನು ಮೂಲದಲ್ಲಿ ಆರ್ಯ ದೇವರಲ್ಲ ಅವನು ಮೂಲ ನಿವಾಸಿಗಳ ದೇವರೆಂದೂ, ಆರ್ಯರು ಮೂಲ ನಿವಾಸಿಗಳ ಅನೇಕ ವಿಷಯಗಳನ್ನು ತೆಗೆದುಕೊಂಡಂತೆ ರುದ್ರನಾಗಿ, ವೈದಿಕ ದೇವರುಗಳಲ್ಲಿ ಸಮಾವೇಶ ಮಾಡಿರಬಹುದೆಂದು ಕೆಲವು ಪಂಡಿತರು ತರ್ಕಿಸುತ್ತಾರೆ. ಋಗ್ವೇದ ಸಂಹಿತೆ ಕಾಲದಲ್ಲಿ ರುದ್ರನ ಸ್ಥಾನ ಅಷ್ಟು ಮಹತ್ವದ್ದಲ್ಲವಾದರೂ ಈತನು ದಂಡಿಸುವ ಮತ್ತು ರಕ್ಷಿಸುವ ಶಕ್ತಿಗಳ ವರ್ಣನೆ ಇದೆ.

ಶಿವನನ್ನು ಯಜುರ್ವೇದ ರುದ್ರೀಯದಲ್ಲಿ ಈತನ ಪ್ರಾರ್ಥನೆಯೂ ವರ್ಣನೆಯೂ ಇದೆ. ಶಿವನು ದೊಡ್ಡಯೋಗಿ, ವಿಶ್ವದ ಶಕ್ತಿ ಸರ್ವರೂಪನು, ಮಾಂತ್ರಿಕನು, ಭೂತ ನಾಯಕನು, ಮಹಾಕಾಲನು, ಮೃತ್ಯುಂಜಯನು. ಇವನ ವಾಸಸ್ಥಳ ಸರ್ವತ್ರವಿದ್ದರೂ ಕೈಲಾಸ ಮುಖ್ಯವಾದುದು. ಈತನು ಮುಕ್ಕಣ್ಣನು, ಬಾಲೇಂದ್ರಧರನು, ಕಂಠನೀಲ ವರ್ಣದಿಂದಿದ್ದು, ಅದರ ಸುತ್ತಲೂ ಸರ್ಪವು, ರುಂಡ ಮಾಲೆಯೂ ಇರುವುದು. ಕೈಯಲ್ಲಿ ತ್ರಿಶೂಲ, ಢಮರುಗಗಳಿರುವವು. ಶಿವನನ್ನು ಅನೇಕ ರೂಪಗಳಿಂದ ಪೂಜಿಸುವರು. ಮಹಾದೇವ, ಹರ, ಭೈರವ ಮತ್ತು ಪಶುಪತಿಯೆಂದು, ಗಣಪತಿಯೂ, ಸ್ಕಂದನೂ ಈತನ ಮಕ್ಕಳು. ಪಾರ್ವತಿ ಅಥವಾ ಶಕ್ತಿ ಈತನ ಅರ್ಧಾಂಗಿ. ನಂದಿ ಈತನ ವಾಹನ, ಇವನಿಗೆ ಹತ್ತನೆಯ ಶತಮಾನದವರೆಗೆ ಹಣ್ಣು ಹಂಪಲುಗಳ ನೈವೇದ್ಯ ಕೊಡಲ್ಪಡುತ್ತಿತ್ತು. ಭರತ ಖಂಡದಲ್ಲಿ ಬೌದ್ಧ, ಜೈನರ ಪ್ರಭಾವ ಜಾಸ್ತಿಯಾಗಿ ಪ್ರಾಣಿ ಬಲಿ, ಮಾಂಸಹಾರ ನಿಷೇಧದಿಂದಾಗಿ ಜನರು 10-12 ಶತಮಾನದಲ್ಲಿ ಭಾರತದ ಶೇಕಡ 95 ರಷ್ಟು ಜನ ವ್ಯವಸಾಯಗಾರರಾದುದರಿಂದ ಜೈನರ ಮತ್ತು ಬೌದ್ಧರ ಅಹಿಂಸವಾದ, ಪ್ರಾಣಿಗಳ ಮಾಂಸ ಉಪಯೋಗದ ನಿಷೇದ, ಕ್ಷತ್ರಿಯ ಹಾಗೂ ಶೂದ್ರ ವರ್ಗದ ವರಿಗೆ ಜಿಗುಪ್ಸೆ ಉಂಟಾಗಿ ಈ ವರ್ಗದವರೆಲ್ಲಾ ಮಾಂಸಹಾರ ಸೇವಿಸುವುದಕ್ಕಾಗಿ ಮಹಮದೀಯರ ಪ್ರಾಬಲ್ಯದಿಂದ ಮುಸಲ್ಮಾನರಾಗಿ ಪರಿವರ್ತನೆಗೊಂಡು, ಹಿಂದೂ ಮತವನ್ನು ತ್ಯಜಿಸುವ ಹಂತಕ್ಕೆ ಬಂದಾಗ ಇದನ್ನು ತಪ್ಪಿಸುವುದಕ್ಕಾಗಿ ಅವಧೂತ ಯೋಗಿಗಳೂ ಅವರ ಶಿಷ್ಯ ವೃಂದದವರಿಂದ ವೇದಗಳ ಕಾಲದ ಯಜ್ಞ ಯಾಗಾದಿ, ಪ್ರಾಣಿ ಬಲಿ ಪ್ರಾರಂಭಿಸಿ ಅದರೊಡನೆ ಕಾಳಮುಖಿ ಮುಂತಾದ ಮತ ಪ್ರಚಾರಕರ ಪ್ರಭಾವದಿಂದ ಕಾಲಭೈರವನ ಚಂಡಿಯ ಉಪಾಸಕರಾಗಿ ಮಧ್ಯ, ಮಾಂಸವನ್ನು ಸೇವಿಸಲು ಪ್ರಾರಂಭಿಸಿದರು. ಇದರಿಂದ ಆದಿಶಕ್ತಿ, ಚಂಡಿಕಾ ಪೂಜೆಗಳಿಗೆ ಪ್ರಾಶಸ್ತ್ಯ ಹೆಚ್ಚಿದವು. ರಾಜಾಧಿರಾಜರೂ ಕೂಡ ಅರಮನೆಯಲ್ಲಿ ಧಾರಾಳವಾಗಿ ಮಾಂಸವನ್ನು ಬಳಸುತ್ತಿದ್ದರು. ಅರಮನೆಗಳಲ್ಲಿ ರುಚಿರುಚಿಯಾದ ಮಾಂಸದ ಭಕ್ಷ್ಯಗಳನ್ನು ಮಾಡುವವನಿಗೆ "ಮಾಂಸ ಪಾಕವಿಶಾರದ" ಎಂಬ ಬಿರುದು ಕೊಡುತ್ತಿದ್ದರು. ಸಾಮಾನ್ಯ ಜನರು ಅಂದರೆ, ಮಾಂಸ ಹಾರಿಗಳು ಅಹಿಂಸೆ ಮತ್ತು ಪ್ರಾಣಿ ಬಲಿಯ ನೈವೇದ್ಯದಿಂದ ಪೂಜಿಸತೊಡಗಿದರು. ಹಿಂದೂ ಮತವನ್ನು ತ್ಯಜಿಸಿ ಮುಸ್ಲಿಮರಾದರೆ ಮಾಂಸಹಾರವನ್ನು ಸೇವಿಸಬಹುದೆಂಬ ಆಸೆ ಉಂಟಾಗಿದ್ದ ಕಾಲದಲ್ಲಿ ಈ ರೀತಿಯ ಮತಾಂತರವನ್ನು ತಪ್ಪಿಸಲು ವೇದಗಳ ಕಾಲದ ಯಜ್ಞಯಾಗಾದಿಗಳನ್ನು ಪುನಃ ಪ್ರಾರಂಭಿಸಿ, ವೈದಿಕ ಧರ್ಮದ ಪುನರ್ ಸ್ಥಾಪನೆಗೆ ಅವಧೂತ ಯೋಗಿಗಳು ಮತ್ತು ಅವರ ಶಿಷ್ಯ ವೃಂದದವರು ತುಂಬಾ ಕಷ್ಟಪಟ್ಟರು. ಅದರ ಜೊತೆಯಲ್ಲಿ ಕಾಳಮುಖಿಗಳ ಪ್ರಭಾವವೂ ಹೆಚ್ಚಿ ಈಶ್ವರನ ಇತರ ಅವತಾರಗಳಾದ ಭೈರವೇಶ್ವರ, ಕಲ್ಲೇಶ್ವರ, ಮಹಾಕಾಳಿ, ಕಿರಾತ



ಮುಂತಾದ ದೇವತೆಗಳಿಗೆ ಪ್ರಾಣಿ ಬಲಿಯಿಂದ ತಯಾರಿಸಿದ ನೈವೇದ್ಯವನ್ನು ಇಡುವ ಪರಿಪಾಠ ಪ್ರಾರಂಭವಾಯಿತು. ಇದೇ ರೀತಿ ಪಾರ್ವತಿಯ ಅವತಾರಗಳಾದ ಕಾಳಿ, ಚಾಮುಂಡೇಶ್ವರಿ, ಶಕ್ತಿ, ಭಗವತಿ, ಚಂಡಿ ಮುಂತಾದ ದೇವತೆಗಳಿಗೆ ಮಾಂಸಹಾರ ನೈವೇದ್ಯವನ್ನು ಇಡಲು ಪ್ರಾರಂಭಿಸಿದರು. ಹತ್ತನೆ ಶತಮಾನದವರೆಗೆ ಶಿವ ಪಾರ್ವತಿಯರಿಗೆ ಹಣ್ಣು ಹಂಪಲಗಳ ನೈವೇದ್ಯ ಮಾತ್ರ ಲಭ್ಯವಿತ್ತು. ಈ ರೀತಿ ಅಪರವತಾರಗಳ ಪೂಜೆಯಿಂದಾಗಿ ಮನುಷ್ಯ ಯಾವ ವಸ್ತುವನ್ನು ತಿನ್ನುತ್ತಾನೋ ಅದನ್ನೇ ದೇವರಿಗೆ ನೈವೇದ್ಯವಾಗಿ ಬಳಸುವ ಪರಿಪಾಠ ಪ್ರಾರಂಭವಾಯಿತು. ಅದೇ ರೀತಿ ಗೌಡರು ಈಶ್ವರ, ಸುಬ್ರಮಣ್ಯ, ಭಗಂಡೇಶ್ವರ, ಮಂಜುನಾಥ ದೇವರುಗಳಿಗೆ ಹೂ ಹಣ್ಣು, ಹಂಪಲಗಳನ್ನು ಇಟ್ಟು ಪೂಜಿಸಿದರೆ, ಶಿವನ ಅಸುರವತಾರಗಳಾದ ಭೈರವೇಶ್ವರ, ಮಹಾಕಾಳ ಮುಂತಾದ ದೇವರಿಗೂ ಕಾಳಿ, ಚಾಮುಂಡಿ ಮುಂತಾದ ದೇವತೆಗಳಿಗೆ ಕುರಿ, ಕೋಳಿ, ಹಂದಿ ಮಾಂಸದ ಅಡುಗೆಯಿಂದ ನೈವೇದ್ಯ ತಯಾರಿಸಿ ಪೂಜಿಸುತ್ತಾರೆ. ಇದಲ್ಲದೆ ಗೌಡರು ಭೂತಾರಾಧಕರಾಗಿರುವುದರಿಂದ ಗುಳಿಗ, ಅಜ್ಜಿಕುಟ್ಟಿ, ಪಾಶಾಣಮೂರ್ತಿ, ನಾಗ, ಪಂಜುರುಳಿ, ಕುಟ್ಟಿಚಾತ ಮುಂತಾದ ಭೂತಗಳಿಗೂ ಹಂದಿ, ಕೋಳಿಗಳನ್ನು ಬಲಿಕೊಟ್ಟು ಪೂಜಿಸುತ್ತಾರೆ. ಇದರಿಂದಾಗಿ ಹಿಂದುಗಳು ಬರೇ ಮಾಂಸ ಆಹಾರ ಸೇವನೆಗಾಗಿ ಬೇರೆ ಮತವನ್ನು ಸೇರುವುದು ತಪ್ಪಿ ಹಿಂದುಗಳಾಗಿ ಉಳಿದರು. ಹಿಂದೂ ಸಂಸ್ಕೃತಿಯೂ ಉಳಿಯಿತು. ಅಲ್ಲದೆ ಈ ರೀತಿಯ ಅಸುರಕ್ರಿಯೆ ಮತ್ತು ಭೂತಗಳಿಗೆ ನೈವೇದ್ಯ ಕೊಡುವಾಗ ಜನರು ತಮ್ಮ ನೆಂಟರಿಷ್ಟರಿಗೆ ತಿಳಿಸಿ, ಅವರು ಸಹ ತಮ್ಮ ಕುಟುಂಬದ, ದೈವದ ಕೋಲಕ್ಕೆ ನೈವೇದ್ಯ, ದೈವಕ್ಕೆ ಕೊಡುವಕಾಲಕ್ಕೆ ಬಂದು ಇಂತಹ ಉತ್ಸವಗಳಲ್ಲಿ ಭಾಗವಹಿಸಿ, ಇಡೀ ವರ್ಷ ತಮ್ಮ ಗದ್ದೆ, ತೋಟಗಳಲ್ಲಿ ಕೆಲಸ ಮಾಡಿದವರಿಗೆ ಈ ರೀತಿಯ ಉತ್ಸವಗಳಿಗೆ ಹೋಗಿ ತಮ್ಮ ಮನಸ್ಸಿಗೆ ಶಾಂತಿ ದೊರಕುವ ಮನರಂಜನೆಯ ಒಂದು ಸಂದರ್ಭವಾಯಿತು. ಈಗಿನ ಕಾಲದಂತೆ ಸಿನಿಮಾ, ರೇಡಿಯೋ, ದೂರದರ್ಶನಗಳು ಇಲ್ಲದಿದ್ದ ಆ ಕಾಲದಲ್ಲಿ ಊರಿನ ಜಾತ್ರೆ, ಕುಟುಂಬಗಳ ದೈವದ ಕೋಲ, ಹರಿಕಥೆ, ಗೊಂಬೆಯಾಟ, ಯಕ್ಷಗಾನ, ಬಯಲಾಟಗಳು ಜನರಿಗೆ ಮನಶಾಂತಿ ಕೊಡುವ ಮನರಂಜನೆಯ ಅವಕಾಶಗಳಾಗಿದ್ದವು. ಈ ರೀತಿ ಇದ್ದುದ್ದರಿಂದಲೇ ಗ್ರೀಕರ ಕಾಲದಿಂದ ಹಿಡಿದು ಬ್ರಿಟಿಷರ ಕಾಲದವರೆಗೆ ಪರಕೀಯರ ಧಾಳಿ ಆಕ್ರಮಣಗಳು ನಡೆದರೂ ಹಿಂದೂ ಸಂಸ್ಕೃತಿ ಜೀವಂತವಾಗಿ ಅದರಲ್ಲೂ ಮಧ್ಯಮ ಹಾಗೂ ಕೆಳವರ್ಗಗಳ ಜನತೆ ಯಾವುದೇ ರೀತಿಯ ಆಕರ್ಷಣೆಗೆ ಸಿಲುಕದೆ ಬದುಕಿಕೊಂಡಿವೆ, ಶಿಷ್ಟ ಧರ್ಮಗಳಾದ ಜೈನ ಮತ್ತು ಬೌದ್ಧ ಧರ್ಮಗಳು ಭಾರತದಿಂದ ಮಾಯವಾಗಿವೆ. ಊರಿನ ಹಬ್ಬದ ದೇವತೆಗಳೂ ಅಲ್ಲದೆ ಮನೆಯ ದೈವಗಳಿಗೆ ಹರಿಕೆಯನ್ನು ತೀರಿಸುವುದಕ್ಕಾಗಿ ದೂರದ ಊರುಗಳಿಂದ ಜನ ದೈವದ ಕೋಲ ನಡೆಯುವ ಸಮಯದಲ್ಲಿ ಹರಿಕೆಯನ್ನು ಒಪ್ಪಿಸುತ್ತಾರೆ. ದೈವಗಳ ಕಠಿಣ ಶಿಕ್ಷೆಗೆ ಹೆದರಿ ಕಳ್ಳತನ, ಸುಳ್ಳು ಹೇಳುವುದು ಕಡಿಮೆ ಇದ್ದು ಜನ ಜೀವನದಲ್ಲಿ ನೆಮ್ಮದಿ ಇತ್ತು. ದೈವದ ಕೋಲ, ಹರಿಸೇವೆ ನಡೆಸುವುದರಿಂದ, ಒಂದು ಕುಟುಂಬದ ಎಲ್ಲಾ ಜನರು ತಮ್ಮ ಕುಟುಂಬದ ಮನೆಗಳಿಗೆ ಬಂದು ಸೇರಿ ವರ್ಷಕ್ಕೊಮ್ಮೆಯಾದರೂ ಕುಟುಂಬದ ಸದಸ್ಯರ ಪುನರ್ ಮಿಲನವಾಗುವ ಹಾಗೂ ನೆಂಟರಿಷ್ಟರು ಸೇರುವ ಸಂದರ್ಭ. ಈ ಸಮಯದಲ್ಲಿಯು ಸಹ ಕುಟುಂಬದ, ಗ್ರಾಮದ ಸಣ್ಣ ಪುಟ್ಟ ಕಲಹಗಳು ಆಯಾಯ ದೇವರುಗಳ ಮುಂದೆ ತೀರ್ಮಾನವಾಗಿ ಜನರಲ್ಲಿ ವೈಷಮ್ಯ ಕಡಿಮೆಯಾಗುವ ಪರಿಸ್ಥಿತಿ ಇತ್ತು. ಈಗ ಪಾಶ್ಚಾತ್ಯ ವಿದ್ಯೆಯ ಪರಿಣಾಮವಾಗಿ ಕುಟುಂಬಗಳ ಹಾಗೂ ಗ್ರಾಮಗಳ ಕಟ್ಟು ಕಟ್ಟಳೆ ಸಡಿಲವಾಗಿ ಒಬ್ಬರನ್ನೊಬ್ಬರು, ಒಂದು ಕುಟುಂಬದವರು ಇನ್ನೊಂದು ಕುಟುಂಬದವರ ದ್ವೇಷ ಜಗಳಗಳನ್ನೇ ಮುಂದುವರಿಸಿಕೊಂಡು ಬರುತ್ತಿದ್ದಾರೆ.

**ವೈಷ್ಣವ ದೇವರ ಆರಾಧನೆಗಳು :**

ಋಗ್ವೇದದ ಕಾಲದಲ್ಲೂ ವಿಷ್ಣುವಿನ ಸ್ಥಾನ ತೀರ ಸಣ್ಣದು. ಐದಾರು ಸೂಕ್ತಿಗಳಲ್ಲಿ ಈತನ ವರ್ಣನೆ ಇದೆ. ಬ್ರಾಹ್ಮಣರ ಕಾಲದಲ್ಲಿ ವಿಷ್ಣುವಿನ ಮಹತ್ವ ಹೆಚ್ಚಿ ಆಗ ಅವನು ದೈವೋತ್ತಮನಾದನು. ಉಪನಿಷತ್ತಿನ ಕಾಲದಲ್ಲಿ ಇವನ ಮಹತ್ವ ಇನ್ನೂ ಹೆಚ್ಚಾಗಿ ಬೆಳೆಯಿತು. ವಿಷ್ಣುವಿನ ಅರ್ಧಾಂಗಿ ಲಕ್ಷ್ಮಿ, ವಿಷ್ಣುವು ಹತ್ತು ಅವತಾರಗಳನ್ನು ತಾಳಿದನು. ಅವುಗಳಲ್ಲಿ ರಾಮ, ಕೃಷ್ಣ ಅವತಾರಗಳು ಮಹತ್ವವಾದವು. ಇದರಂತೆ ವಿಷ್ಣುವು ಶ್ರೀನಿವಾಸನಾಗಿ ಅವತರಿಸಿದ ಅವನೇ ವೆಂಕಟೇಶ್ವರ, ವಿಜಯನಗರ ರಾಜರ ಮನೆ ದೇವತೆ ವೆಂಕಟೇಶ್ವರನಾದುದರಿಂದ ಗೌಡರೂ ಸಹ ತಮ್ಮ ಮನೆಗಳಲ್ಲಿ ತಿರುಪತಿ ವೆಂಕಟರಮಣನನ್ನು ಪೂಜಿಸಲು ಪ್ರಾರಂಭಿಸಿದರು. ಇದಕ್ಕೆ ಕಾರಣ 12ನೆಯ ಶತಮಾನದಲ್ಲಿ ಶ್ರೀ ರಾಮನುಜಾಚಾರ್ಯರು ಶೈವ ಧರ್ಮಕ್ಕೆ ಆಶ್ರಯದಾತರಾದ ಚೋಳರಾಜರ ಕಿರುಕುಳ ತಡೆಯಲಾರದೆ ಆಗಿನ ಮೈಸೂರು ದೇಶಕ್ಕೆ ಬಂದು ಕರ್ನಾಟಕ ಹಾಗೂ ಆಂಧ್ರ ಪ್ರದೇಶಗಳಲ್ಲಿ ವೈಷ್ಣವ ಪಂಥವನ್ನು ಸಾರಿದರು. ಇದರಿಂದಾಗಿ ವಿಜಯನಗರದ ಅರಸರು ಹಾಗೂ ಅವರ ಪ್ರಜೆಗಳು ವೈಷ್ಣವರಾದರು. ಅದೇ ರೀತಿ ಗೌಡರೂ ಸಹ ವೈಷ್ಣವರಾದರು. ಆದರೆ ಗೌಡರು ವೈಷ್ಣವರಾದರೂ ಶೈವ-ದೇವತೆಗಳಾದ ಶಿವ, ಗಣೇಶ, ಸುಬ್ರಮಣ್ಯ, ಅಯ್ಯಪ್ಪ, ಪಾರ್ವತಿ, ಚಾಮುಂಡೇಶ್ವರಿ, ಶಕ್ತಿ, ಕಾಳಿ ಮುಂತಾದ ದೇವತೆಗಳ ಆರಾಧನೆ ಈಗಲೂ ಮಾಡುತ್ತಿದ್ದಾರೆ.

ವೆಂಕಟರಮಣ ಭಕ್ತರಾದುದರಿಂದ ಗೌಡರು ಪ್ರತಿ ಮನೆಯಲ್ಲೂ ವೆಂಕಟರಮಣನಿಗೆ ಮುಡುಪನ್ನು ಇಟ್ಟು ಮೂರು ಅಥವ ವರ್ಷಕ್ಕೊಂದಾವರ್ತಿ ಹರಿಸೇವೆಯನ್ನು ಆಚರಿಸುತ್ತಾರೆ. ಇದೇ ಸಮಯದಲ್ಲಿ ಕೆಲವರು ದೈವದ ಕೋಲ (ಭೂತದ ಕೋಲ) ವನ್ನು ಮಾಡುತ್ತಾರೆ. ಹರಿಸೇವೆ ಮುಗಿದ ನಂತರ ಕೆಂಚರಾಯನ



ಸೇವೆಯನ್ನು ಮಾರನೇ ದಿನ ಮಾಡುತ್ತಾರೆ. ಕೆಂಚರಾಯನ ಪೂಜೆಗೆ ಕುರಿ, ಕೋಳಿಯನ್ನು ಬಲಿ ಕೊಡುತ್ತಾರೆ. ಆದುದರಿಂದ ವೆಂಕಟೇಶ್ವರನಿಗೆ ಹಣ್ಣು ಹಂಪಲುಗಳ ನೈವೇದ್ಯ ಆದರೆ ಕೆಂಚರಾಯನಿಗೆ ಮಾಂಸಹಾರದ ನೈವೇದ್ಯ. ಮದು-ಮಕ್ಕಳಿಗೆ ಹರಿಕೆ ಹಣ ಕಟ್ಟುವಾಗ ಕಟ್ಟಿದ ಪಾಟೆ ಗುತ್ತಿಯಲ್ಲಿ ಹಾಕಿದ ಸಾಲ್ಕಾಣಿ ಪಾವಲಿ, ಒಳ್ಳೆ ಮೆಣಸನ್ನು ಮನೆಯವರು ತಮ್ಮ ಮುಡುಪನ್ನು ನಮ್ಮಲ್ಲಿ ಯಾರಾದರು ತಿರುಪತಿಗೆ ಹೋದರೆ ದೇವರ ಭಂಡಾರಕ್ಕೆ ಹಾಕುವ ಪದ್ಧತಿ ಇಂದಿಗೂ ರೂಢಿಯಲ್ಲಿದೆ. ಹಾಗೆ ಹಾಕಿದ ಭಂಡಾರದಲ್ಲಿ ಒಂದು ಕಾಳು ಕರಿಮೆಣಸನ್ನು ಸಹ ಬೇರೆ ಕಡೆ ಕಳೆಯಬಾರದೆಂಬ ಕಟ್ಟು ಕಟ್ಟಲೆ ಇದೆ. ಅಲ್ಲದೇ ಆ ಹಣವನ್ನು ಯಾವ ರೀತಿಯಲ್ಲೂ ಅದರಲ್ಲಿ ಹಣವನ್ನು ವ್ಯಕ್ತಿಗತ ಖರ್ಚಿಗಾಗಿ ಉಪಯೋಗಿಸಬಾರದು. ಆ ರೀತಿ ಏನಾದರು ಉಪಯೋಗಿಸಿದರೆ ಉಪಯೋಗಿಸಿದವರ ವಂಶವೇ ನಾಶವಾಗಿ ಹೋಗುವುದೆಂಬ ಭೀತಿಯೂ ಜನರಲ್ಲಿದೆ. ಒಂದು ವೇಳೆ ತಿರುಪತಿಗೆ ಹೋಗುವವರಿಗೆ ಹಣದ ತೊಂದರೆ ಇದ್ದರೆ ಮನೆಯಲ್ಲಿರುವ ತಿರುಪತಿಗೆ ಹೋಗುವವರಿಗೆ ಆಗುವ ಖರ್ಚನ್ನು ಮುಡುಪಿನ ಹಣದಿಂದ ಖರ್ಚು ಮಾಡಬಹುದೆಂದೂ ಹಿಂತಿರುಗಿ ಬರುವಾಗ ಒಂದು ಕಾಳು ಒಳ್ಳೆ ಮೆಣಸನ್ನು ಹಿಂದಕ್ಕೆ ತರಕೂಡದೆಂಬ ಕಟ್ಟು ಕಟ್ಟಲೆ ಇದೆ. ಗೌಡರಲ್ಲಿ ಕೆಲವು ಮನೆತನದವರು ಕೆಂಚಮ್ಮ ದೇವರಿಗೆ ಹರಿಕೆ ಹಣ ಕಟ್ಟಿ ಸಕಲೇಶಪುರ ತಾಲ್ಲೂಕಿನ ಕೆಂಚಮ್ಮನ ಹೊಸಕೋಟೆಯ ದೇವಸ್ಥಾನಕ್ಕೆ ಕಳುಹಿಸಿ ಕೊಡುವ ಪದ್ಧತಿ ಇದೆ. ಹರಿಕೆ ಹಣ ಕಟ್ಟುವಾಗ ಸಬ್ಬಮ್ಮ ದೇವರಿಗೆ ಹರಿಕೆ ಹಣ ಕಟ್ಟುವಂತವೇ ಎಂದು ಹೇಳುತ್ತಾರೆ. ಇದಕ್ಕೆ ಕಾರಣವೇನೆಂದರೆ, ಹಿಂದೆ ಗೌಡರ ಗುರು ಶೃಂಗೇರಿಯ ಶಂಕರಾಚಾರ್ಯರಾಗಿದ್ದರು. ಆಗ ಗುರು ಕಾಣಿಕೆಗಾಗಿ ವರನು ವಧುವಿನ ಮನೆಯಲ್ಲಿ ತೆರವು ಹಣ ರೂ. 6-25 ರೊಂದಿಗೆ ಹರಕೆ ಹಣ ಕಟ್ಟಿದನ್ನು ಸಬ್ಬವ್ವ ದೇವರಿಗೆ ಅಂದರೆ ಶಾರದಾಂಬೆಯ ಭಂಡಾರಕ್ಕೆ ತಲುಪಿಸಬೇಕಿತ್ತು. ಶೃಂಗೇರಿಯಲ್ಲಿ ಆದಿ ಶಂಕರಾಚಾರ್ಯರು ಶಾರದಾ ಪೀಠವನ್ನು ಸ್ಥಾಪಿಸಿದುದರಿಂದ, ಶಾರದಾಂಬೆಗೆ ಕಳುಹಿಸಿಕೊಡುವ ಕಟ್ಟಳೆಯಾಗಿದೆ. ಆದರೆ ಈಗ ಶೃಂಗೇರಿಯ ಗುರುವಿನ ಸಂಬಂಧ ಕಡಿದು ಹೋಗಿರುವುದರಿಂದ ಗೌಡರೆಲ್ಲಾ ತಿರುಪತಿಗೆ ಹರಿಕೆ ಹಣವನ್ನು ಕಳುಹಿಸುತ್ತಾರೆ.

ಈ ರೀತಿ ಶೈವ-ವೈಷ್ಣವ ದೇವರಲ್ಲದೆ ಗೌಡರು ನೆಲಸಿದ ಊರಿನ ದೇವರುಗಳನ್ನು ಪೂಜಿಸುತ್ತಾರೆ. ಉದಾಹರಣೆಗೆ ಕೊಡಗಿನ ಗೌಡರೆಲ್ಲರೂ ಮದುವೆಯಾದ ವರ್ಷದಲ್ಲಿ ದಂಪತಿಗಳು ಕಾವೇರಿಸ್ನಾನ ಮಾಡಬೇಕೆಂಬ ಪದ್ಧತಿ ಇದೆ. ಮನೆಯ ಹಿರಿಯರು ಸತ್ತರೆ ಕಾವೇರಿಗೆ ಹೋಗಿ ಪಿತೃಗಳಿಗೆ ಸಂಗಮದಲ್ಲಿ ಪಿಂಡ ಹಾಕುತ್ತಾರೆ. ಈ ರೀತಿ ಪಿಂಡ ಹಾಕುವುದರಿಂದ ಸತ್ತವರು ಸ್ವರ್ಗ ಸೇರುತ್ತಾರೆಂಬ ಭಾವನೆ ಎಲ್ಲಾ ಹಿಂದುಗಳಲ್ಲಿ ಇರುವಂತೆ ಗೌಡರಲ್ಲೂ ಇದೆ. ದಕ್ಷಿಣ ಕನ್ನಡ ಜಿಲ್ಲೆಯ ಗೌಡರಲ್ಲಿಯೂ ಸಹ ಆ ಜಿಲ್ಲೆಯ ಪ್ರಮುಖ ದೇವರುಗಳಾದ ಕುಕ್ಕೆ ಸುಬ್ರಹ್ಮಣ್ಯ, ಧರ್ಮಸ್ಥಳದ ಮಂಜುನಾಥ ಮತ್ತು ಅಣ್ಣಪ್ಪ ದೇವರ ಮೇಲೆ ಅಪಾರ ಭಕ್ತಿಯುಳ್ಳವರಾಗಿದ್ದಾರೆ. ಅಲ್ಲದೇ ಗೌಡರು ವಾಸವಾಗಿರುವ ಗ್ರಾಮ, ನಾಡುಗಳ ದೇವರುಗಳನ್ನು ಅಲ್ಲಿಯ ಜಾತ್ರೆ, ಹಬ್ಬಗಳ ಸಮಯದಲ್ಲಿ ಹೋಗಿ ಪೂಜಿಸುತ್ತಾರೆ. ಉದಾಹರಣೆಗೆ ಕೊಡಗಿನ ನಾಡದೇವರಾದ ಇಗ್ಗುತಪ್ಪ, ಗ್ರಾಮ ದೇವತೆಗಳಾದ ಈಶ್ವರ, ಭಗವತಿ ದೇವರನ್ನು ಪೂಜಿಸುತ್ತಾರೆ. ಇವಲ್ಲದೆ ಹಿಂದಿನ ಕಾಲದಿಂದಲೂ ನಡೆದು ಬಂದಿರುವ ಐಯ್ಯಪ್ಪನ ತೋಟದಲ್ಲು ಪೂಜೆ ಸಲ್ಲಿಸುತ್ತಿದ್ದಾರೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಆಯಾಯ ಮನೆ ಭೂತಗಳಿಗೆ ಪೂಜೆಯನ್ನು ಸಲ್ಲಿಸುತ್ತಾರೆ. ಈ ಪೂಜೆಯು ಹಣ್ಣು ಹಂಪಲಿನ ನೈವೇದ್ಯವೂ ಆಗಿರಬಹುದು ಅಥವಾ ಪ್ರಾಣಿ ಬಲಿಯಿಂದ ತಯಾರಿಸಿದ ಮಾಂಸದ ನೈವೇದ್ಯವೂ ಆಗಬಹುದು. ಇದಲ್ಲದೆ ಗೌಡರು ತಮ್ಮ ಹಿರಿಯರನ್ನು ಶುಭ ಮತ್ತು ಅಶುಭ ಸಮಯದಲ್ಲಿ ನೆನೆಯುವಾಗ ಅವರಿಗೆ ಮಾಂಸದಿಂದ ಮಾಡಿದ ಅಡಿಗೆಯ ಎಡೆಯನ್ನು ಹಾಕಿ ಹಿರಿಯರಿಗೆ ನೈವೇದ್ಯವನ್ನು ಹಾಕುತ್ತಾರೆ.

ಈ ಎಲ್ಲಾ ಸಂಗತಿಗಳನ್ನು ಗಮನಿಸಿದರೆ ಹಿಂದೂ ಸಮಾಜಗಳಲ್ಲಿ ಎಲ್ಲಾ ಜಾತಿಯವರು ದೇವರುಗಳನ್ನು ಆರಾಧಿಸುತ್ತಾರೆ. ಗೌಡರಿಗೆ ಗೌಡರದ್ದೇ ಆದ ಪ್ರತ್ಯೇಕ ದೇವರಾಗಲಿ, ದೇವತೆಗಳಾಗಲಿ ಇಲ್ಲ. ಆದುದರಿಂದ ಗೌಡರು ಹಿಂದೂ ಮತದಲ್ಲಿರುವ ಬೇರೆ ಜಾತಿ ಸಮಾಜದವರೊಡನೆ ಸಾಮಾನ್ಯವಾಗಿ ಎಲ್ಲಾ ದೇವತೆ, ದೇವರುಗಳನ್ನು ಪೂಜಿಸುತ್ತಾರೆ. ಗೌಡರ ಜಾತಿಯ ಪದ್ಧತಿಯು ಬೇರೆ ಜಾತಿಯವರ ಪದ್ಧತಿಗಿಂತ ಭಿನ್ನವಾಗಿದ್ದರೂ, ದೇವಾರಾಧನೆಯಲ್ಲಿ ಬೇರೆ ಹಿಂದೂ ಜಾತಿಯವರಂತೆ ಪೂಜೆ-ಪುರಸ್ಕಾರಗಳಲ್ಲಿ ಭಾಗವಹಿಸಿ, ಭಾರತೀಯ ವಿಭಿನ್ನ ಸಂಸ್ಕೃತಿಯಲ್ಲಿ ಏಕತೆಯನ್ನು ಸಾಧಿಸಿದ್ದಾರೆ. ಇದೇ ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯ. ಇದರಲ್ಲಿ ಅಡಗಿರುವುದೇ ಹಿಂದೂ ಸಂಸ್ಕೃತಿಯ ತಿರುಳು.

ಗ್ರಂಥಋಣ

1) ಕನ್ನಡ ನಾಡಿನ ಚರಿತ್ರೆ: ಕನ್ನಡ ಸಾಹಿತ್ಯ ಪರಿಷತ್
2) ಒಕ್ಕಲಿಗರು: ಶ್ರೀ ದೊಡ್ಡಪ್ಪ ಗೌಡರು

☆ ಪೂಜಾರ ಮೊಣ್ಣಪ್ಪ



## ಕೊಡಗು ಸಂಗಾತಿ ಕಂಡದ್ದು, ಕೇಳಿದ್ದು, ಆಡಿದ್ದು

ಕೊಡಗು ಸಂಗಾತಿಯ ಪ್ರಥಮ ಹುಟ್ಟುಹಬ್ಬಕ್ಕಾಗಿ ಶುಭಕೋರುತ್ತೇನೆ. ಇದು ಗೌಡ ಅರೆಭಾಷಿಕ ಜನಾಂಗದ ಏಕೈಕ ಪತ್ರಿಕೆ ಎಂದರೆ ತಪ್ಪಾಗಲಾರದು. ಈ ಹಿಂದೆ ಒಂದೆರಡು ಪತ್ರಿಕೆಗಳು ಹುಟ್ಟಿ ಮುಂದೆ ಬೆಳೆಯಲಿಲ್ಲ, ಇದಕ್ಕೆ ವಿಷಾಧಿಸುತ್ತೇನೆ.

'ಕೊಡಗು ಸಂಗಾತಿ' ಎಂದು ನಾಮಕರಣವಾಗಿ ಹುಟ್ಟಿದ ಈ ಮಗುವನ್ನು ಪ್ರಾರಂಭದಲ್ಲಿ ಎತ್ತಿ ಮುದ್ದಾಡಲು ಗೌಡಜನಾಂಗದವರೇ ಯಾಕೆ ಇಡೀ ಕೊಡಗಿನ ಮೂಲೆ ಮೂಲೆಗಳಲ್ಲಿನ ಇತರ ಜನಾಂಗದವರೂ ಒಮ್ಮೆ ದೃಷ್ಟಿ ಹಾಯಿಸಿ, ಎತ್ತಿಕೊಳ್ಳಬೇಕೋ ಬೇಡವೋ ಎಂದು ಮುಖಪುಟಗಳನ್ನು ಓದಿದಾಕ್ಷಣ ಇದು ನಮ್ಮ ಜನಾಂಗದ ಪತ್ರಿಕೆ ಅಲ್ಲ ಎಂದು ಎಷ್ಟೋ ಮಂದಿ ಯಾವ ಗೋಜಿಗೂ ಹೋಗಲಿಲ್ಲ. ಪ್ರಥಮದಲ್ಲಿ ನಿಮ್ಮ ಮಗು ನಮ್ಮ ಅಂಗಳದಲ್ಲೇ ಬೆಳೆಯಲಿ ಎಂದು ನಮ್ಮ ಜನಾಂಗದವರು ಹರಸಿದ್ದೇ ಹರಸಿದ್ದು. ಹಾಗೆನೇ ತನ್ನ ಮಗುವನ್ನು ಹಾಗೆ ಬೆಳೆಸುತ್ತೇನೆ, ಹೀಗೆ ಬೆಳೆಸುತ್ತೇನೆಂದು ಕನಸು ಕಾಣುತ್ತಾ ಎಲ್ಲವರ ಪ್ರೀತಿಯ ಕೂಸಾಗಿ ಮುಂದಿನ ಒಂದೆರಡು ತಿಂಗಳುಗಳಿಂದಲೆ ಇದನ್ನು ಬೆಳೆಸಿಕೊಂಡು ಹೋಗುವ ರೀತಿ ಹೇಗೆ ಎಂದು ಹಗಲು ರಾತ್ರಿ ತಲೆಗೆ ಕೈ ಹೊತ್ತು ಕೂತಿದ್ದ ನಿಮ್ಮ ಮನದ ಅಳಲನ್ನು ಸಂಪೂರ್ಣ ಅರಿತು ಅರ್ಥಮಾಡಿಕೊಂಡಿರುವ ಇತರ ಕೆಲವು ಓದುಗರಂತೆ ನಾನೂ ಒಬ್ಬನಾಗಿ ಕೆಲವು ವಿಚಾರಗಳನ್ನು ಕೊ. ಸಂಗಾತಿಯ ಒಂದನೆಯ ಹುಟ್ಟುಹಬ್ಬದ ಪ್ರಯುಕ್ತ ಕೆಲವು ಕಂಡದ್ದು, ಕೇಳಿದನ್ನು ಇಲ್ಲಿ ಬರೆಯಲು ಇಚ್ಛಿಸುತ್ತೇನೆ.

ಪತ್ರಿಕೆ ಬೇಕು ಎಂಬ ಆಶೆ ತುಂಬಾ ಜನರಲ್ಲಿದೆ. ಆದರೆ ಇಷ್ಟು ಚಿಕ್ಕ ಪತ್ರಿಕೆಗೆ 'ಐದು' ರೂಪಾಯಿನಾ ಎಂಬ ಅಳುಕು ಸಹ ಇದೆ. ಮುಖ ಪುಟ ಚೆನ್ನಾಗಿಲ್ಲ, ಬಣ್ಣದ ಮುಖ ಪುಟಗಳಿಂದ ಮುದ್ರಿಸಬೇಕಿತ್ತು ಎಂಬ ಹಿತವಚನ ಇನ್ನೊಂದು ಕಡೆಯಿಂದ. ಪುಟಗಳು ಕಮ್ಮಿಯಾಯಿತು, ಬರವಣಿಗೆ ಸ್ಟ್ಯಾಂಡರ್ಡ್ ಇಲ್ಲ ಹೀಗೆ ಸಾಲು ಸಾಲಾಗಿ ಟೀಕೆ ಟಿಪ್ಪಣಿಗಳು. ಈ ರೀತಿ ಲೋಪ ದೋಷಗಳನ್ನು ಕಂಡು ಹೇಳುವವರಲ್ಲಿ ಹೆಚ್ಚಿನ ಜನ ಸದಸ್ಯರಲ್ಲದ ಕದ್ದು ಓದುವವರೇ ಜಾಸ್ತಿ. ಇದು ನಮ್ಮ ಜನಾಂಗದ ಪತ್ರಿಕೆ ಯಾದುದರಿಂದ, ತನ್ನ ಪೋಟೋ ಹಾಕಿಸಿರುವುದರಲ್ಲೇ ತೃಪ್ತಿ ಹೊಂದುವವರಿಗೇನು ಕಮ್ಮಿ ಇಲ್ಲ. ಸದಸ್ಯತ್ವವನ್ನು ಉಭಯಸಂಕಟದಲ್ಲಿ ಹೊಂದಿ ಅರ್ಧಕ್ಕೆ ನಿಲ್ಲಿಸಿದವರೂ ನಂಬಿಕೆ ಇಟ್ಟು ಸದಸ್ಯರಾಗುತ್ತಾರೆಂಬ ಅಭಿಲಾಷೆಯ ಮೇರೆಗೆ, ಎಷ್ಟೋ ಮಂದಿಗೆ ಸಂಗಾತಿಯನ್ನು ನೀವು ಕಳುಹಿಸಿಕೊಟ್ಟದ್ದಕ್ಕೆ ಬೈಗಳ ಕೊಟ್ಟವರೂ ಇದ್ದಾರೆ. ಮೈಸೂರಿನ ನಮ್ಮ ವಿದ್ಯಾ ಸಂಘದ ವತಿಯಿಂದ ಪ್ರಾರಂಭದಲ್ಲಿ ಆಶ್ರಯಕ್ಕೆ (ಅಂದರೆ ಉದ್ಘಾಟನಾ ಸಮಾರಂಭದ ಸಮಯದಲ್ಲಿ) ಒಪ್ಪಿಗೆ ನೀಡಿ ಕೊನೆ ಘಳಿಗೆಯಲ್ಲಿ ಆಡಳಿತ ವರ್ಗದವರು ಕೊಟ್ಟಕಷ್ಟವನ್ನು ನೆನಸಿಕೊಂಡರೆ ಆಶ್ಚರ್ಯವಾಗುತ್ತದೆ. ಈ ರೀತಿ ತರತರಹದ ಕಷ್ಟ ನಷ್ಟಗಳನ್ನು ನೀವು ಎದೆಗುಂದದೆ ಧೈರ್ಯ ಮತ್ತು ದೈವ ಪ್ರೇರಣೆಯಿಂದ ಎದುರಿಸಿದ್ದೀರಿ ಎಂಬ ವಿಚಾರ ಹೆಚ್ಚಿನ ನಮ್ಮ ಓದುಗ ಬಳಗದವರಿಗೆ ಗೊತ್ತಿಲ್ಲ. ಇಷ್ಟೆಲ್ಲಾ ನಡೆದರೂ ತಾಳ್ಮೆಗೆಡದೆ ಸದಾ ಗುರುಹಿರಿಯರನ್ನು ನೆನೆಸಿ, ಅಳುತ್ತಿದ್ದ ಸಂಗಾತಿಯನ್ನು ಬೆಳೆಸಿ, ಒಂದು ವರ್ಷ ನಡೆಸಿದ ನಿಮ್ಮ ಛಲಕ್ಕೆ ನನ್ನ ಹೃತ್ಪೂರ್ವಕ ನಮನಗಳು.

ಈಗ ಮಗು ಹೆಜ್ಜೆಯಿಟ್ಟು ನಡೆಯಲು ಪ್ರಾರಂಭಿಸಿದೆ. ಆದರೆ ನನ್ನ ಒಂದು ಮಾತನ್ನು ನೆನೆಪಿನಲ್ಲಿಡಬೇಕು. ಪತ್ರಿಕೆ ಅಚ್ಚಾಗಿ ಹೊರಬೀಳುವುದನ್ನೇ ಪಾರಕಾಯುವ ತುಂಬಾ ಓದುಗರ ಪೈಕಿ ಶೇಕಡ 60 ರಷ್ಟು ಮಂದಿ ಕೇಳಿ ಪಡೆದು ಓದುವವರೇ ವಿನಃ ಕೊಂಡು ಓದುವವರಲ್ಲ ! ಬಸ್ಸಿನೊಳಗೆ ನಿಮ್ಮ ಸಂಗಾತಿ ಪತ್ರಿಕೆ ಹಕ್ಕುದಾರನ ಕೈಯಿಂದ ಎಷ್ಟು ಕೈಗೆ ದಾಟಿ ಹೋಗುತ್ತದೆ ಎಂದರೆ ಪುಕ್ಕಟ್ಟೆ ಓದುವವರೇ ಜಾಸ್ತಿ. ನನ್ನ ಪಕ್ಕದವರ ಮನೆಗೆ ಬರುತ್ತೆ. ನಾನು ಸದಾ ಓದುತ್ತಿರುತ್ತೇನೆ ಎಂದು ಸದಸ್ಯರಾಗದೆ ತಪ್ಪಿಸಿ ಕೊಂಡು, ಪತ್ರಿಕೆ ಬಹಳ ಚೆನ್ನಾಗಿದೆ ಎಂದು ಪ್ರೋತ್ಸಾಹಿಸುವವರೂ ಇದ್ದಾರೆ. ಸದಸ್ಯರಾಗದೆ 10 ತಿಂಗಳ ವರೆಗೆ ಅಭಿಲಾಷೆ ಇಟ್ಟು ನೀವು ಕಳುಹಿಸುತ್ತಿದ್ದ ಪತ್ರಿಕೆಗಳನ್ನು ಪುಕ್ಕಟೆ ಓದುತ್ತಾ ನೀವು ಕಳುಹಿಸುವುದನ್ನು ಒಮ್ಮೆಲೆ ನಿಲ್ಲಿಸಿದಕ್ಕೆ ಛೇ! ಪತ್ರಿಕೆ ಏಕೆ ನಿಂತು ಹೋಯಿತು ಎಂದು ನೊಂದು ಕೊಂಡವರೂ ಇದ್ದಾರೆ. ಮೈಸೂರು ಅಡ್ರಾಸ್ಸು ಬದಲಾಗಿದೆಯಂತೆ ಈಗಿನ ಅಡ್ರಾಸ್ಸು ತಿಳಿಯುವುದಿಲ್ಲ. ಹಣ ಕಳುಹಿಸಬೇಕಿತ್ತು ಹೇಗೆ ಕಳುಹಿಸುವುದು ಎಂದು ಪ್ರಶ್ನೆಗಳ ಸಾಲನ್ನೇ ಬಿಚ್ಚಿದವರಿಗೆ ಸೂಕ್ತ ಸಲಹೆ ನೀಡಿದಾಗ ಓ... ನಿಮ್ಮ ಮನೆಗೆ ಹಣ ಕಳುಹಿಸಿ ದರಾಯಿತಲ್ಲಾ, ಬರುತ್ತೇನೆ ಈಗ ಬಹಳ ತುರ್ತುನಲ್ಲಿದ್ದೇನೆ ಎಂದು ಮಡಿಕೇರಿ ನಗರದಲ್ಲಿರುವವರೇ ಹೇಳುತ್ತಾರೆ. ಇದಕ್ಕೆ ಏನೆನ್ನುತ್ತೀರಿ ? ಹೀಗೆ ನಾನಾ ರೀತಿಯ ಮಾತುಗಳನ್ನು ಆಡುವವರ ಪೈಕಿ ನಾನೂ ಏನೂ ಕಮ್ಮಿ ಇಲ್ಲ ಅನ್ನಿ. 'ಇವರಿಗೇನು ಹುಚ್ಚು ಹಿಡಿದಿದೆಯಾ, ಇವರ ತಿಕಕ್ಕೆ ಯಾರು ಹೊಡೆದರೆಂದು ಆಡಿಕೊಂಡಂತೆ ನಿಮ್ಮ ಇತರ ಆಪ್ತರು ಏನೂ ಹೇಳದೆ ಇರುವವರೆನ್ನುತ್ತೀರ. ಅದು ಏನೇ ಇರಲಿ ತನ್ನ ರಾತ್ರಿ ಕನಸ್ಸನ್ನು ಹಗಲು ನನಸು ಮಾಡುವ ನಿಟ್ಟಿನ ಪ್ರಯುತ್ನಕ್ಕೆ ನಮ್ಮ ಕುಲದೇವರಾದ ಶ್ರೀ ವೆಂಕಟರಮಣ ಸ್ವಾಮಿಯ ಅನುಗ್ರಹ ಸದಾ ಇರಲಿ. ಸೋಲು ಗೆಲುವಿನ ಮಹತ್ವದಲ್ಲಿ ತನ್ನ ಸತತ ಪ್ರಯತ್ನದ ಪಾತ್ರದ ಫಲವನ್ನು ಈಗಾಗಲೆ ನೀವುಗಳು ಅರಿತಿರುವಿರಿ ಎಂದು ಭಾವಿಸಿದ್ದೇನೆ. ಮುಂದೆ ಕೊಡಗು ಸಂಗಾತಿ ನಮ್ಮ ಜನಾಂಗದ ಸರ್ವರ ಕೈ ಕೂಸಾಗಿ ಪ್ರೀತಿಯಿಂದ ದೇಶದ ಎಲ್ಲೆಡೆ ಬೆಳೆಯುತ್ತಿರಲಿ ಎಂದು ಹಾರೈಸುತ್ತೇನೆ.

✫ ಬೈತಡ್ಕ ಅಯ್ಯಪ್ಪ ಬೆಳ್ಯಪ್ಪ, ಮಡಿಕೇರಿ



# ಮಾಧ್ಯಮ ( ಪತ್ರಿಕೆ ) ಎಷ್ಟು ಮುಖ್ಯ?

ಸಸ್ತನಿ ಪ್ರಾಣಿಗಳಲ್ಲಿ ಮನುಷ್ಯ ಬಹಳ ಮೇಲು. ಇತರ ಪ್ರಾಣಿಗಳು ಮನುಷ್ಯನ ಸರಿಸಮಾನ ಬರಲಾರದು, ಮನುಷ್ಯನು ಸಂಘ ಜೀವಿ. ಸಂಘವಿಲ್ಲದೆ ಮನುಷ್ಯನಿಲ್ಲ; ಮನುಷ್ಯನಿಲ್ಲದ ಸಂಘವಿಲ್ಲ. ಸಂಘ ಇಲ್ಲದೆ ಮನುಷ್ಯನಿಗೆ ಯಾವತ್ತು ಜೀವಿಸಲು ಸಾಧ್ಯವಿಲ್ಲ. ಹಾಗಿರುವಾಗ ಈತನಿಗೆ ತನ್ನ ಅಭಿಪ್ರಾಯವನ್ನು ಇತರರಿಗೂ ಇತರ ಅಭಿಪ್ರಾಯವನ್ನು ತಾನು ತಿಳಿದುಕೊಳ್ಳುವ ಇಚ್ಛೆ ಉಂಟಾಗುತ್ತದೆ. ಅಂತೆಯೇ ಜೊತೆಯಾಗಿಯೇ ಇದ್ದು ಜೊತೆಯಾಗಿಯೇ ನಕ್ಕು ನಲಿಯುವುದಕ್ಕೆ ಇಷ್ಟಪಡುತ್ತಾರೆ.

ಭರತ ಖಂಡವನ್ನು ಭೌಗೋಳಿಕವಾಗಿ ಅವಲೋಕಿಸಿದಾಗ ಬೆಟ್ಟ ಪ್ರದೇಶಗಳಿಂದಲೂ, ನದಿಗಳಿಂದಲೂ, ಬಯಲುಗಳಿಂದಲೂ ಕೂಡಿರುತ್ತದೆ. ಅವರಿಗೆಲ್ಲಾ ತಿಳಿಹೇಳಲು ಮಾಧ್ಯಮ ಬೇಕಾಗಿರುತ್ತದೆ. ಆ ಮಾಧ್ಯಮಗಳೇ ಇಂದಿನ ಕಾಲದ ದೂರದರ್ಶನ ಮತ್ತು ಪತ್ರಿಕೆ. ದೂರದರ್ಶನವು ದೇಶದ ಎಲ್ಲಾ ಸ್ಥಳಗಳನ್ನು ತಲಪುವುದಿಲ್ಲ. ಆದರೆ ಪತ್ರಿಕಾ ಮಾಧ್ಯಮ ಮಾತ್ರವೇ ದೇಶದ ಹಳ್ಳಿಗಳ ಮೂಲೆ ಮೂಲೆ ಗಳಿಗೆ ತಲಪುವ ಏಕೈಕ ವ್ಯವಸ್ಥೆಯಾಗಿದೆ.

ಕೊಡಗು ನಾಡಿನಲ್ಲಿ ಈಗ ಪ್ರಧಾನವಾಗಿ ಜನಸಂಖ್ಯೆಯಲ್ಲಿ ಗೌಡ ಜನರದ್ದೇ ಪ್ರಾಧ್ಯಾನ್ಯವಾಗಿದೆ. ಜನ ಸಂಖ್ಯೆಯಲ್ಲಿ ಹೆಚ್ಚಿನ ಜನರಿದ್ದರು ಅಭಿವೃದ್ಧಿಯಲ್ಲಿ ಹೇಳುವಂತಹ ಪ್ರಗತಿ ಸಾಧಿಸಿಲ್ಲವೆನ್ನಬೇಕು. ಇಲ್ಲಿಯ ಗೌಡ ಜನರು ಸಂಘಟಿತರಾಗದೆ ಇದ್ದದು ದುರಾದೃಷ್ಟವೆನ್ನಬೇಕು. ಒಂದು ಶತಮಾನದ ಹಿಂದೆ ಅಂದರೆ1834 ರಲ್ಲಿ ಕೊಡಗಿನ ರಾಜ ಚಿಕ್ಕ ವೀರರಾಜೇಂದ್ರನ ಪದಚ್ಯುತಿ ನಂತರ, ಬ್ರಿಟಿಷರ ದಬ್ಬಾಳಿಕೆಯ ಒಡೆದು ಆಳುವ ನೀತಿಯಿಂದಲೂ ಆಗಿನ ಪ್ರಭಾವಿ ಜನಾಂಗದ ಕಪಿ ಮುಷ್ಠಿ ಹಿಡಿತದಿಂದಲೂ ನಲುಗಿದ ಈ ನಮ್ಮ ಗೌಡ ಜನಾಂಗ ಯಾವುದೇ ಕ್ಷೇತ್ರದಲ್ಲಿ ಮುಂದುವರಿಯಲಾಗದ ಪರಿಸ್ಥಿತಿ 1910ರ ತನಕ ಉಂಟಾಗಿತ್ತು.

ಆಗಿನ ನಮ್ಮ ಹಿರಿಕರು ಶ್ರಮಿಸದ ಫಲವಾಗಿ 1908 ಮತ್ತು 1909 ರಲ್ಲಿ ಎರಡು ವಿದ್ಯಾ ಸಂಘಗಳು ಅರೇ ಭಾಷಾ ಕ್ಷೇತ್ರದಲ್ಲಿ ಸ್ಥಾಪನೆಗೊಂಡವು. ಆ ಸಮಯದಲ್ಲಿ ನಮ್ಮ ಹಿರಿಯರು ವಿದ್ಯಾವಂತ, ಬುದ್ಧಿವಂತ ಕಿರಿಯರಿಗಾಗಿ ಹುಡುಕಾಡುತ್ತಿದ್ದರು. ಅವರಿಗೆ ಪ್ರೋತ್ಸಾಹ ಧನ ಸಹಾಯ ನೀಡಿ ಮುಂದುವರಿಯಲು ಅವಕಾಶ ಕಲ್ಪಿಸುತ್ತಿದ್ದರು.

ಇಂತಹ ನಿಧಿಗಳಲ್ಲಿ ಪಾರುಪತ್ತೇಗಾರ ಶ್ರೀ ನಿಡ್ಯಮಲೆ ರಾಮಪ್ಪನವರನ್ನು ಸ್ಮರಿಸಲೇಬೇಕು. ತನಗಾದ ಅವಮರ್ಯಾದೆಯನ್ನು ಸಹಿಸಲು ಸಾಧ್ಯವಿಲ್ಲದೆ, ಕಷ್ಟಪಟ್ಟು ತನ್ನ ಮಕ್ಕಳನ್ನೇ ಪ್ರತಿಭಾವಂತರನ್ನಾಗಿ ಮಾಡಿ ಗೌಡ ಸಮುದಾಯಕ್ಕೆ ನೀಡಿದ್ದಾರೆ. ಶ್ರೀ ನಿಡ್ಯಮಲೆ ಬೆಳ್ಯಪ್ಪ, ಮುದ್ದಪ್ಪ, ಸೋಮಣ್ಣ ಇವರ ಆಗಮನದ ನಂತರ ಇತರ ನಮ್ಮ ಸಮಾಜದಲ್ಲಿ ಬದಲಾವಣೆಯ ರೂಪ ಪಡೆಯಿತ್ತೆನ್ನಬೇಕು.

ನಮ್ಮ ಜನಾಂಗವು 1935-45 ರ ತನಕ ಅಭಿವೃದ್ಧಿಯ ಉತ್ತುಂಗ ಶ್ರೇಣಿಯಲ್ಲಿತ್ತು. ಆಗಿನ ಸಂಘಟನೆ ತುಂಬ ಚೆನ್ನಾಗಿದೆ ಎನ್ನಬೇಕು.

ಆದರೆ ಸ್ವಾತಂತ್ರ್ಯದ ನಂತರ ಇಂದಿನ ದಿನಗಳಲ್ಲಿ ಉತ್ತಮ ಜನನಾಯಕರಿಲ್ಲದೆ ನಮ್ಮ ಸಮಾಜ ನಲುಗಬೇಕಾಯಿತು. ಸಮಾಜದ ಕಟ್ಟು ಕಟ್ಟಳೆಗಳು ನೀತಿ ರೀತಿ ನಿಯಮಗಳನ್ನು ಕಾಪಾಡುವುದರಲ್ಲಿ ನಮ್ಮ ಜನರು ತನ್ನ ಮಾತೃ ಭಾಷೆಯನ್ನು ಮರೆಯುವಂತಾಯಿತು. ತನ್ನ ಆಚಾರ - ವಿಚಾರಗಳನ್ನು ಉಡುಪಿನ ಕೊರತೆಯನ್ನು ಕಾಣವಂತಾಯಿತು. ಇಂದು ನಮ್ಮಲ್ಲಿ ಹಿಂದಿನ ಕಾಲದಲ್ಲಿ ಧರಿಸುತ್ತಿದ್ದ ರಾಜ ಠೀವಿಯ ರಾಜ ಉಡುಪಿನ ಕುಪ್ಪಸ, ದಟ್ಟಿ, ಪೇಟಾಗಳು ಮಾಯವಾದವು. ಮದುವೆ ಸಮಾರಂಭಗಳಲ್ಲಿ ಹಾಕುತ್ತಿದ್ದ ಕೋಟು, ಪಂಚೆ ಕಚ್ಚೆ ರುಮಾಲುಗಳು ಸಹ ಕ್ಷಣಿಕವಾಗಿ ಎಲ್ಲೋ ಕೆಲವು ಕಡೆ ಹಳ್ಳಿಗಳಲ್ಲಿ ಮಾತ್ರ ಹಾಕುವಂತಾಗಿದೆ. ಶ್ರೀಮಂತ ವರ್ಗ... ಈ ಎಲ್ಲಾ ಉಡುಪುಗಳ ಅವಶ್ಯಕತೆ ಇಲ್ಲದೆ ವಿದೇಶಿಯರ ಅನುಕರುಣೆಯಿಂದಾಗಿ ಸರ್ವ ನಾಶವಾಗಿದೆ. ವಿದೇಶಿಯರ ಅಂದಾನುಕರಣೆಗಾಗಿ ಒಳಗಾಗಿರುವ ಈ ವಿಷಯದಲ್ಲಿ ನೊಂದು ಬೆಂದು ಚಿಂತಿಸುತ್ತಿದ್ದ ಈ ಸಂದರ್ಭದಲ್ಲಿ ಪತ್ರಿಕಾ ಮಾಧ್ಯಮ ಮಾತ್ರ ಜನರಿಗೆ ತಿಳಿಹೇಳುವ ಏಕೈಕ ಉತ್ತಮ ಮಾಧ್ಯಮವಾಗಿ ಗೋಚರಿಸಿತು.

1985 ರ ಸುಮಾರಿಗೆ ಸುಳ್ಯದ ಕುರುಂಜಿ ವೆಂಕಟರಮಣ ಗೌಡರ ಕೃಪೆಯಿಂದ ಕೊಡಗಿನಲ್ಲಿ ಜನ ಸಾಕಷ್ಟು ಸಂಘಟಿತರಾದರು. ನಂತರ ನಿಧಾನವಾಗಿ ಸಂಘ ಸಂಸ್ಥೆಗಳು ನಿಷ್ಕ್ರಿಯವಾದವು. ಪುನಃ 1996 ರಲ್ಲಿ ಇನ್ನೊಮ್ಮೆ ಸಂಘಟನೆಗೆ ಚಾಲನೆ ಬಂತು. ಆಗ ಕೊಡಗಿನಲ್ಲಿ ಸಾಕಷ್ಟು ಅಂದರೆ ಹೇಳಿಕೊಳುವಷ್ಟು ಪ್ರೋತ್ಸಾಹ ಸಿಗಲಿಲ್ಲ. ಸಂಘಟನೆಗೆ ಚಾಲನೆ ಯಿಲ್ಲದೆ, ಜಡತ್ವ ನಿರ್ಮಾಣವಾಗಿತ್ತು. ನಿಜ ಹೇಳಬೇಕೆಂದರೆ ಒಬ್ಬ ನಾಯಕತ್ವದ ಕೊರತೆ ಎದ್ದು ಕಾಣುತ್ತಿತ್ತು. ಒಬ್ಬರನೊಬ್ಬರು ಹಿತವಚನ ಪಾಲಿಸದೆ ತನ್ನದೆ ಆದ ಭಿನ್ನ ಭಿನ್ನ ದಾರಿಯಲ್ಲಿ ಹೋಗುವಂತ ಸ್ಥಿತಿ ಉಂಟಾಯಿತು.

ಜನಾಂಗದಲ್ಲಿ ಏಕ ಅಭಿಪ್ರಾಯವಾಗಲೀ, ಉತ್ತಮ ನಾಯಕರಾಗಲಿ ಅವರಿಂದ ಸಂಘಟಿಸಲು ಸಾಧ್ಯವಾಗದೆ ಸರ್ವವು ಸ್ವಾರ್ಥಮಯವಾಗಿ ಗೋಚರಿಸುತಿತ್ತು. ಪ್ರತಿಯೊಬ್ಬರು ಮಹಾಸ್ವಾರ್ಥಿಗಳಾಗಿ ತಾನು ತನ್ನ ಹೆಂಡತಿ ಮಕ್ಕಳು ಮಾತ್ರ

ಅನ್ವಯ ಹಂತಕ್ಕೆ ಬಂದ [illegible] ( ಕ್ರೀ[illegible] ಸಂಸ್ಕೃತಿಗಳು ಅವಸಾನದ ಅಂಚಿನಲ್ಲಿ ಇವೆಲ್ಲವನ್ನು ಗಿಸಲು ಜನರಿಗೆ ಅರಿಯೆ ತಿಳಿಯು ಪಡಿಸಲು ಪತ್ರಿಕಾ ಮಾಧ್ಯಮದ ಅವಶ್ಯಕತೆ ಬಹಳ ಬೇಕೆನ್ನಿಸಿತು.

ಕೊಡಗಿನಲ್ಲಿ ಪ್ರಮುಖವಾಗಿ ಅತ್ತೀ ಹೆಚ್ಚಿನ ಸಂಖ್ಯೆಯಲ್ಲಿ ನಮ್ಮ ಜನರಿದ್ದರೂ ಸಹ ಕೊಡಗಿನ ಒಳಗಡೆ ಆಗುವ ಯಾವುದೇ ಸರ್ಕಾರಿ ಕೆಲಸವಾಗಲಿ, ಇನ್ನಿತರ ಖಾಸಗಿ ಕೆಲಸವಾಗಲಿ ನಡೆಯುವ ಸಂದರ್ಭದಲ್ಲಿ ಈ ಜನಾಂಗವನ್ನು ಕಡೆಗಣಿಸುತ್ತಿರುವುದು ಈಗಲೂ ಮುಂದುವರೆದಿದೆ. ಅವರ ಅಭಿಪ್ರಾಯಗಳನ್ನು ಲೆಕ್ಕಿಸುವುದಿಲ್ಲ. ಯಾವುದೇ ರೀತಿಯಲ್ಲಿ ಸ್ಥಾನಮಾನಗಳಿಲ್ಲ. ಇತರ ಪ್ರಭಾವಿ ಜನಾಂಗ ತಾತ್ಸಾರದಿಂದ ನೋಡುವ ಇಂದಿನ ಕಲುಷಿತ ವಾತಾವರಣದಿಂದ ನೊಂದು ಪತ್ರಿಕಾ ಮಾಧ್ಯಮದ ಅವಶ್ಯಕತೆ ಅನಿವಾರ್ಯವಾಯಿತು.

ಜಿಲ್ಲೆಯಲ್ಲಿ ಇಷ್ಟು ದೊಡ್ಡ ಪ್ರಮಾಣದಲ್ಲಿ ನಮ್ಮ ಜನರಿದ್ದರೂ ನಮ್ಮಲ್ಲಿ ಯಾವುದೇ ರೀತಿಯಲ್ಲಿ ತಿಳಿಹೇಳಲು, ಪ್ರಚಾರಪಡಿಸಲು ಮಾಧ್ಯಮ ಇರಲಿಲ್ಲ. ಆಚಾರ ವಿಚಾರಗಳು, ಸಂಸ್ಕೃತಿಗಳು ಅವಸಾನದ ಅಂಚಿನಲ್ಲಿ ಇರುವುದನ್ನು ಗಮನಿಸಿ 21 ನೇ ಶತಮಾನಕ್ಕೆ ಹೋಗುವ ಸಂದರ್ಭದಲ್ಲಿ ಮೊದಲನೇಯವಾಗಿ ಸಂಘಟಿತರಾಗಿ, ನಂತರ ಉದಾರಭಾವದಿಂದ ತಮ್ಮಲ್ಲಿರುವ ಇತರ ಎಲ್ಲಾ ಕೆಲವು ಕೆಟ್ಟ ಗುಣಗಳನ್ನು ಬಿಟ್ಟು ಉತ್ತಮ ದಾರಿಯಲ್ಲಿ ಮುಂದುವರಿಯಲು ಹತ್ತು ಹಲವು ಕನಸುಗಳನ್ನು ಹೊತ್ತು ತಮ್ಮಲ್ಲಿರುವ ಪ್ರತಿಭೆಯನ್ನು ಗುರುತಿಸಿ, ಯುವಶಕ್ತಿಯನ್ನು ಸಂಘಟಿಸಿ, ಒಂದು ಜನಾಂಗದ ಐಕ್ಯತೆ, ಏಳಿಗೆಯೇ ಒಂದು ದೇಶದ ಪ್ರಗತಿಯೆಂದು ಭಾವಿಸಿ ದೇಶಕ್ಕೆ ಸತ್ಪ್ರಜೆಗಳನ್ನಾಗಿ ಮೂಡಿಸುವ ನಿಟ್ಟಿನಲ್ಲಿಯೂ, ಕೊಡಗಿನ ನಮ್ಮ ಜನಾಂಗದಲ್ಲಿ ಸಾಕಷ್ಟು ಲೇಖಕರನ್ನು ಕಲೆ ಹಾಕುವ, ಗ್ರಾಮ ಕುಗ್ರಾಮಗಳ ಮೂಲೆ ಮೂಲೆಗೆ ಈ ಎಲ್ಲ ವಿಷಯಗಳನ್ನು ತಿಳಿಹೇಳುವ ನಿಟ್ಟಿನಲ್ಲಿ ಜನಾಂಗದ ಪ್ರಗತಿಗಾಗಿ ನಿಸ್ವಾರ್ಥತೆಯಿಂದ ಕೂಡಿ ಹೊರಬಂದಿದೆ ಈ ಕೊಡಗು ಸಂಗಾತಿ.

☆ ಮಣ್ಣಂಡ್ರ ಕೆ. ತಮ್ಮಯ್ಯ, ಮೈಸೂರು

| | | | |
|---|---|---|---|
| 1) | ಸೂಡನ ಪೊನ್ನಪ್ಪ ಮೋಹನ | ಮೈಸೂರು | 1000/- |
| 2) | ಕುಂಚಡ್ಕ ಎಸ್. ಉಲ್ಲಾಸ | ಬೆಂಗಳೂರು | 1000/- |
| 3) | ಕೋರನ ಡಬ್ಲ್ಯು ವಿಶ್ವನಾಥ್ | ಕೊಡಗು | 1000/- |
| 4) | ಕೂಡಕಂಡಿ ಎಂ. ಅಪ್ಪಾಜಿ | ಮಡಿಕೇರಿ | 1000/- |
| 5) | ಪಳ್ಳಿಪುರರ ಎಸ್. ಭರತ್ | ಮಡಿಕೇರಿ | 1000/- |
| 6) | ಹೊಸೂರು ಜಿ. ಸೀತರಾಮ್ | ಮೈಸೂರು | 1000/- |
| 7) | ಪಾಣತ್ತಲೆ ಬೋಪಯ್ಯ | ಬೆಂಗಳೂರು | 1000/- |
| 8) | ಕಣ್ಣಯ್ಯನ ಎ. ವಿಶ್ವನಾಥ್ | ಕೊಡಗು | 1000/- |
| 9) | ಅಮೆ. ಕೆ. ಸೋಮಣ್ಣ | ಬೆಂಗಳೂರು | 1000/- |
| 10) | ಹುದೇರಿ ಉತ್ತಪ್ಪ ನಾಗೇಶ್ | ಕೊಡಗು | 1000/- |
| 11) | ತಲಕಾಡು ಆರ್. ಮುದ್ದೇಗೌಡ | ಮೈಸೂರು | 1000/- |
| 12) | ಪೇರಿಯನ ಜಯನಂದ | ಕೊಡಗು | 1000/- |
| 13) | ಕೋಳಿಬೈಲು. ಎ ಬೆಳ್ಯಪ್ಪ | ಬೆಂಗಳೂರು | 1000/- |
| 14) | ದಂಬೆಕೋಡಿ ಎಸ್. ಪೂವಯ್ಯ | ಕೊಡಗು | 1000/- |
| 15) | ಬೈತಡ್ಕ ಅಯ್ಯಪ್ಪ ಜೋಯಪ್ಪ | ಬೆಂಗಳೂರು | 1000/- |

**"ಕೊಡಗು ಸಂಗಾತಿ", ಪಾಕ್ಷಿಕಕ್ಕೆ ಜೀವಾವಧಿ ಸದಸ್ಯತ್ವ ನೀಡಿ ಸಹಕರಿಸಿದ ಮಹಾನುಭಾವರು**

# ನಮ್ಮ ದೇಶದ ಆರ್ಥಿಕ ವ್ಯವಸ್ಥೆ

ನಮ್ಮ ದೇಶ ಸ್ವಾತಂತ್ರ್ಯ ಸಿಕ್ಕಿದ ನಂತರ ಇಲ್ಲಿಯವರೆಗೆ ಅಂದರೆ 90ರ ದಶಕದ ವರೆಗೆ ತನ್ನದೇ ಆದ ಆರ್ಥಿಕ ನೀತಿಯನ್ನು ಆಚರಿಸುತ್ತಾ ಬಂದಿತ್ತು. ಅಲ್ಲಿಯವರೆಗೆ ಆಮದು ಸ್ವಾತಂತ್ರ್ಯ ಮಾಡುವುದಕ್ಕೆ ಪ್ರೋತ್ಸಾಹ ಕೊಟ್ಟು, ವಿದೇಶಿ ಬಂಡವಾಳ, ವಿದೇಶಿ ತಂತ್ರಜ್ಞಾನ, ವಿದೇಶಿ ವಸ್ತುಗಳನ್ನು ಕಡೆಗಣಿಸುತ್ತಾ ಬಂದಿತು. ಇದರಿಂದ ಭಾರತದ ವಸ್ತುಗಳಲ್ಲಿ ಗುಣಮಟ್ಟದ ಕೊರತೆ ಮತ್ತು ಅತೀ ಕಡಿಮೆ ಉತ್ಪಾದನಾ ವಸ್ತುಗಳ ಅಭಾವ ಶುರುವಾಯಿತು. ಭಾರತದಲ್ಲಿ ಉತ್ಪತ್ತಿಯಾದ ವಸ್ತುಗಳಿಗೆ ಹೊರದೇಶಗಳಲ್ಲಿ ಬೇಡಿಕೆಯೂ ಕಡಿಮೆಯಾಗುತ್ತಾ ಬಂದಿತು. ಆದರೆ ಹೊರದೇಶಗಳಿಂದ ತರಿಸಿಕೊಳ್ಳುತ್ತಿದ್ದ ವಸ್ತುಗಳು (ಉದಾ: ಪೆಟ್ರೋಲ್ ಉತ್ಪನ್ನಗಳು, ಕಂಪ್ಯೂಟರ್‌ಗಳು,) ಜಾಸ್ತಿಯಾದವು. ಇದರಿಂದ ಭಾರತದ ಆರ್ಥಿಕ ಪರಿಸ್ಥಿತಿ ಹದಗೆಡಲು ಕಾರಣವಾಯಿತು. ರೂಪಾಯಿಯ ಮೌಲ್ಯ ಜಾಗತಿಕ ಮಾರುಕಟ್ಟೆಯಲ್ಲಿ ಕುಸಿಯುತ್ತಾ ಬಂದಿತ್ತು. ವಿಶ್ವ ಬ್ಯಾಂಕ್ ಹಾಗೂ I.M.F., A.D.B. ಗಳಿಂದ ತೆಗೆದುಕೊಂಡಿದ್ದ ಸಾಲದ ಸುಳಿಯಲ್ಲಿ ಸಿಕ್ಕುವ ಪರಿಸ್ಥಿತಿ ಬಂದು ಒದಗಿತ್ತು ಮತ್ತು ಹೊಸ ನೆರವಿಗೆ ಈ ಅಂತರಾಷ್ಟ್ರೀಯ ಸಂಸ್ಥೆಗಳು ಹೆಚ್ಚಿನ ಷರತ್ತುಗಳನ್ನು ಹೇರಲು ಶುರುಮಾಡಿದ್ದವು. ಇದರಿಂದ ವಿಶ್ವದಲ್ಲಿ ಬೇರೆ ಎಲ್ಲಾ ರಾಷ್ಟ್ರಕ್ಕಿಂತ ಭಾರತಕ್ಕೆ ಹೆಚ್ಚು ಹಣಕಾಸಿನ ನೆರವು ನೀಡಿದ್ದ ವಿದೇಶಿ ಸಂಸ್ಥೆಗಳನ್ನು ಜನರು ದೂಷಿಸಲು ಶುರುಮಾಡಿದರು. (ಸಾಲ ತೆಗೆದುಕೊಂಡು ಹಣವನ್ನು ದುರುಪಯೋಗ ಪಡಿಸಿಕೊಂಡು ಅದನ್ನು ಮರುಪಾವತಿಸಲು ಸಾಧ್ಯವಾಗದೇ ಇದ್ದಾಗ ಆವನು ಸಾಲಕೊಟ್ಟವನನ್ನೆ ವಿನಾಕಾರಣ ದೂಷಿಸಲು ಶುರುಮಾಡುವುದು ಮಾನವನ ಬಂದ ಸಹಜ ಗುಣ) .

90ರ ದಶಕದ ನಂತರ ಭಾರತಕ್ಕೆ ಒಂದೇ ದಾರಿ ಉಳಿದಿತ್ತು. ಅದೇ ಉದಾರೀಕರಣ ನೀತಿ. ಅಲ್ಲಿಯವರೆಗೆ ಒಳಮುಖವಾಗಿ ನೋಡುತ್ತಿದ್ದ ನೀತಿಯಿಂದ ಹೊರಮುಖವಾಗಿ ನೋಡಲು ಪ್ರಾರಂಭವಾಯಿತು. ಇದರಿಂದ ವಿದೇಶಿ ತಂತ್ರಜ್ಞಾನ, ವಿದೇಶಿ ಬಂಡವಾಳ ಮತ್ತು ಭಾರತದಲ್ಲಿ ತಯಾರಾದ ವಸ್ತುಗಳಿಗೆ ಹೊರದೇಶಗಳಲ್ಲಿ ಬೇಡಿಕೆ. ಸಾರಿಗೆ ವ್ಯವಸ್ಥೆ, ಪ್ರವಾಸೋದ್ಯಮ ಹೀಗೆ ಎಲ್ಲಾ ವಿಧದಲ್ಲಿಯೂ ಪ್ರಗತಿ ಸಾಧಿಸಲು ಸಾಧ್ಯವಾಯಿತು. ಅಲ್ಲಿಯವರೆಗೆ ಶೇಖಡ 3ರಿಂದ 5 ರಷ್ಟಿದ್ದ ರಾಷ್ಟ್ರೀಯ ಉತ್ಪನ್ನ ಶೇಖಡ 7ರಷ್ಟು ಹೆಚ್ಚಾಗಲು ಶುರುವಾಯಿತು. ಜನರಲ್ಲಿ ಗುಣಮಟ್ಟದ ಬಗ್ಗೆ ಅರಿವು ಮೂಡಿತು ಮತ್ತು ಇದರಿಂದ ತಯಾರಕರಲ್ಲಿ ಗುಣಮಟ್ಟದ ಸುಧಾರಣೆಗೆ ಹಾಗೂ ಬೆಲೆ ಇಳಿತಕ್ಕೆ ಪೈಪೋಟಿ ಶುರುವಾಯಿತು. ಗ್ರಾಹಕರಿಗೆ ಉತ್ತಮ್ಮ ಗುಣಮಟ್ಟದ ವಸ್ತುಗಳು ಯೋಗ್ಯ ಬೆಲೆಗೆ ಸಿಗುವಂತಾಯಿತು. ವಿದೇಶಿ ವಸ್ತುಗಳ ವ್ಯಾಮೋಹ ಕಡಿಮೆಯಾಯಿತು. ರೈತರು ಬೆಳೆದ ಆಹಾರ ಧಾನ್ಯಗಳಿಗೆ ವಿಶ್ವ ಮಾರುಕಟ್ಟೆಯಲ್ಲಿ ಹೆಚ್ಚಿನ ಬೆಲೆಗೆ ಮಾರಾಟವಾಗಲು ಶುರುವಾಯಿತು. ರೈತರ ಆರ್ಥಿಕ ಪರಿಸ್ಥಿತಿ ಒಮ್ಮೆಲೆ ಹೆಚ್ಚಾಗಲು ಸಾಧ್ಯವಾಯಿತು.

ಇನ್ನು 2-3 ವರ್ಷಗಳಲ್ಲಿ ರೂಪಾಯಿಯನ್ನು ಬಂಡವಾಳ ಖಾತೆಯಲ್ಲಿ ಪೂರ್ಣ ಪರಿವರ್ತನೆಗೆ (Captial Account Convertability) ಭಾರತ ಸಜ್ಜಾಗುತ್ತಿದೆ. ಇದಕ್ಕೆ ಬೇಕಾದ ಮಾರ್ಗದರ್ಶನವನ್ನು ಶ್ರೀ ಎಸ್. ಎಸ್. ತಾರಾಪುರ್ ಎಂಬುವವರ ನೇತೃತ್ವದಲ್ಲಿ ತಯಾರಿಸಲಾಗಿದೆ. ಇದನ್ನು ರೂಢಿಗೆ ತಂದರೆ ಭಾರತೀಯರು ತಮ್ಮಲ್ಲಿರುವ ರೂಪಾಯಿಯನ್ನು ವಿಶ್ವದ ಯಾವುದೇ ರಾಷ್ಟ್ರದಲ್ಲಿ ಸರಕಾರದ ಹಸ್ತಕ್ಷೇಪವಿಲ್ಲದೆ ಬಂಡವಾಳ ರೂಪದಲ್ಲಿ ಅಥವಾ ವಿದೇಶಿ ಬ್ಯಾಂಕುಗಳಲ್ಲಿ ತೊಡಗಿಸಬಹುದು. ವಿಶ್ವದ ಯಾವುದೇ ನೋಟುಗಳೊಂದಿಗೆ ತನ್ನಲ್ಲಿರುವ ರೂಪಾಯಿಗಳನ್ನು ಸರಕಾರದ ಅಥವಾ ರಿಸರ್ವ್ ಬ್ಯಾಂಕಿನ (R.B.I) ಅನುಮತಿಯಿಲ್ಲದೆ ವಿನಿಮಯ ಮಾಡಿಕೊಳ್ಳಬಹುದು. ಅದೇ ರೀತಿ ವಿದೇಶಿಯರು ಭಾರತದಲ್ಲಿ ಯಾವುದೇ ಉದ್ಯಮ ಅಥವಾ ಕೃಷಿಕ್ಷೇತ್ರದಲ್ಲಿ ತಮ್ಮ ಹಣವನ್ನು ತೊಡಗಿಸಿ ಇಬ್ಬರೂ ಲಾಭವನ್ನು ಹೊಂದಬಹುದು. ಸಿಂಗಪೂರ್‌ನಂತಹ ಅಭಿವೃದ್ಧಿ ಹೊಂದಿದ ದೇಶಗಳು ಈ ನೀತಿಯನ್ನು ಅನುಸರಿಸುತ್ತಿವೆ. ಇದರಿಂದ ನಮ್ಮ ದೇಶ ವಿದೇಶಿಯರ ಪಾಲಾಗುತ್ತದೆ ಎನ್ನುವುದು ತಪ್ಪು.

ಈ ಹೊಸ ನೀತಿಯನ್ನು ಅನುಕರಿಸಲು ಕೆಲವು ಆವಶ್ಯಕತೆಗಳನ್ನು ಮೊದಲು ಪೂರೈಸಬೇಕಾಗುತ್ತದೆ. ಹಣದುಬ್ಬರವನ್ನು ಶೇಖಡ 4-5 ಕ್ಕೆ ಸೀಮಿತಗೊಳಿಸುವುದು, ಬಜೆಟ್ ಕೊರತೆಯನ್ನು ಶೇಖಡ 3 ಕ್ಕೆ ಇಳಿಸುವುದು.

ಬ್ಯಾಂಕಿನ ಸಾಲ ಬಾಕಿಯನ್ನು ಶೇಖಡ 5ಕ್ಕೆ ಇಳಿಸುವುದು ಮತ್ತು ಭಾರತದ ಆಮದು ಮತ್ತು ಭಾರತದಿಂದ ಹೊರಹೋಗುವ ಹಣಕ್ಕಾಗಿ ಸುಮಾರು 30 ಬಿಲಿಯನ್ ಡಾಲರಿನಷ್ಟು ಶೇಖರಿಸಿ ಇಟ್ಟುಕೊಳ್ಳುವುದು. ಇವಿಷ್ಟು ಸಾಧಿಸಿದರೆ ಭಾರತದ ರಾಷ್ಟ್ರೀಯ ಉತ್ಪನ್ನ ಶೇಖಡ 20 ರಷ್ಟು ಪ್ರತಿ ವರ್ಷ ಹೆಚ್ಚಾಗುವ ಸಾಧ್ಯತೆ ಇದೆ. ಇದನ್ನು ಸಾಧಿಸುವುದು ಬರೇ ಸರ್ಕಾರದ ಕೆಲಸವೆನ್ನುವುದು ತಪ್ಪು. ಪ್ರತಿಯೊಬ್ಬ ಪ್ರಜೆಯೂ ತನ್ನ ಪಾಲಿನ ಅಳಿಲು ಸೇವೆಯನ್ನು ಸಲ್ಲಿಸಿದರೆ ನಮ್ಮ ಭಾರತ ಕೆಲವೇ ವರ್ಷಗಳಲ್ಲಿ ವಿಶ್ವದಲ್ಲಿಯೇ ಪ್ರಥಮ ಸ್ಥಾನ ತಲುಪುವಲ್ಲಿ ಯಾವ ಸಂಶಯವೂ ಇಲ್ಲ.

ಉಳುವಾರನ ತಿಮ್ಮಯ್ಯ ಸುರೇಶ್‌ಕುಮಾರ್
ನಿಪ್ಪಾಣಿ

ಬೆಂಗಳೂರಿನಲ್ಲಿ ನಮ್ಮವರ ಸಾಧನೆ

# ನಂಗಾರು ಸೋಮಪ್ಪ ರಾಮಯ್ಯ

'ವ್ಯಕ್ತಿ ತಾನೊಬ್ಬನೇ ಬಾಳಿದರೆ ಸಾಲದು, ತನ್ನೊಂದಿಗೆ ಸಮಾಜವು ಬಾಳಬೇಕು' ಎಂಬ ನಾಣ್ನುಡಿಯಲ್ಲಿ ನಂಬಿಕೆಯಿದ್ದ ವ್ಯಕ್ತಿಯೆಂದರೆ ಶ್ರೀ ನಂಗಾರು ರಾಮಯ್ಯನವರು ಇವರ ಆದರ್ಶ, ಔದಾರ್ಯ, ಸಜ್ಜನಿಕೆ, ಸತ್ಯನಿಷ್ಠೆ, ಪ್ರೀತಿ, ದೂರದೃಷ್ಟಿ, ಸಹಬಾಳ್ವೆ, ಅನಾದೃಶ್ಯವಾದುದು.

1926 ಜುಲೈ ತಿಂಗಳಲ್ಲಿ ಇವರ ಜನನ. ಇವರ ತಂದೆ ತಾಯಿಯೆಂದರೆ ಸೋಮಪ್ಪ ಮತ್ತು ಪೊನ್ನಮ್ಮ. ಹುಟ್ಟಿದ್ದು ಭಾಗಮಂಡಲ ನಾಡು ಕೋರಂಗಾಲದಲ್ಲಿ. ವಿದ್ಯೆಯಲ್ಲಿ ಮೊದಲ ಸಾಲಿನಲ್ಲಿ ಕುಳಿತು ತರಗತಿಯಲ್ಲಿ ಮೊದಲು ಬರುತ್ತಿದ್ದ ವ್ಯಕ್ತಿ ವಿಧಿಯ ಆಟಕ್ಕೆ ಒಳಗಾದದ್ದು ಒಂದು ದುರಂತವೇ ಸರಿ. ಚಿಕ್ಕ ವಯಸ್ಸಿನಲ್ಲಿಯೇ ತಾಯಿಯನ್ನು ಕಳೆದುಕೊಂಡ ರಾಮಯ್ಯನವರು ಶಾಲೆಯನ್ನು ಬಿಟ್ಟು ವ್ಯವಸಾಯ ಕಾರ್ಯದಲ್ಲಿ ನಿರತರಾಗಬೇಕಾಯಿತು. ಅನಕ್ಷರಸ್ಥರಾಗಿ ಬೆಳೆದದ್ದು ಅವರನ್ನು ಕೊನೆಯವರೆಗೆ ಕಾಡುತ್ತಿತ್ತು.

ಸ್ವಲ್ಪ ಸಮಯದ ನಂತರ ಇವರು ತಂದೆಯೊಂದಿಗೆ ಭಾಗಮಂಡಲದಿಂದ ಇಂದಿನ ಸೋಮವಾರಪೇಟೆ ತಾಲ್ಲೂಕಿನ ನಾಗವಾಲದಲ್ಲಿ ಬಂದು ನೆಲೆಸಿದರು. ಕಾಡು-ಮೇಡು, ಹುಲಿ-ಕರಡಿ ಮತ್ತು ಆನೆಯ ಕಾಟವನ್ನು ಲೆಕ್ಕಿಸದೆ 'ಕಾಯಕವೇ ಕೈಲಾಸ' ಎಂಬ ಮಂತ್ರದಲ್ಲಿ ನಂಬಿಕೆಯಿಟ್ಟು ಬೆವರು ಸುರಿಸಿ ಸಾಗುವಳಿ ಮಾಡಿ ಭೂತಾಯಿಯನ್ನು ಆರಾಧಿಸಿ ಚಿನ್ನ ಬೆಳೆದವರು ಶ್ರೀ ರಾಮಯ್ಯನವರು.

ಇವರ ವಿವಾಹವು 1953 ರಲ್ಲಿ ಪೂಜಾರಿ ಅಚ್ಚಯ್ಯನವರ ಪ್ರಥಮ ಪುತ್ರಿ ಶ್ರೀಮತಿ ಮಾಚಮ್ಮ (ಪೂಜಾರಿ ಮೊಣ್ಣಪ್ಪನವರ ತಂಗಿ) ನವರೊಡನೆ ನಡೆಯಿತು. ಕೆಲವು ವರ್ಷಗಳ ನಂತರ ನಾಗವಾಲದಲ್ಲಿದ್ದ ಈ ದಂಪತಿಗಳು ಪಕ್ಕದ ಸಂಗಯ್ಯನಪುರಕ್ಕೆ ಬಂದು ನೆಲೆಸಿದರು. ನಮಗೆ ಬಂದ ಸ್ಥಿತಿ ತನ್ನ ಮಕ್ಕಳಿಗೆ ಬರಬಾರದೆಂದು ದೂರದೃಷ್ಟಿಯಿಂದ ತನ್ನ ಮಕ್ಕಳನ್ನು ಕೊನೆಯ ಪಕ್ಷ ಡಿಗ್ರಿಯವರಗಾದರು ಓದಸಲೇಬೇಕೆಂಬ ಛಲದಿಂದ ಕಂಕಣ ತೊಟ್ಟವರು ರಾಮಯ್ಯ ದಂಪತಿಗಳು. ವಿದ್ಯೆಯ ಪ್ರಾಮುಖ್ಯತೆಯನ್ನು ಅರಿತಿದ್ದ ಸನ್ಮಾನ್ಯರು ಗಣಗೂರು ಪ್ರಾಥಮಿಕ ಶಾಲೆ ಮತ್ತು ಬಾಣವಾರ ಪ್ರಾಥಮಿಕ ಶಾಲೆಯ ಸ್ಥಾಪನೆಯಲ್ಲಿ ಬಹಳ ಪ್ರಮುಖ ಪಾತ್ರವನ್ನು ವಹಿಸಿದರು. ಈ ಶಾಲೆಗಳ ಶಾಲಾಭಿವೃದ್ಧಿ ಸಮಿತಿಯ ಸದಸ್ಯರಾಗಿ ಅವಿರತವಾಗಿ ದುಡಿದಿದ್ದಾರೆ. ಈ ಶಾಲೆಗಳಿಗೆ ಹೊಸದಾಗಿ ಬಂದ ಶಿಕ್ಷಕರಿಗೆ ಇವರ ಮನೆಯೆ ಅತಿಥಿಗೃಹವಾಗಿತ್ತೆಂದರೆ ಅತಿಶಯೋಕ್ತಿಯಾಗಲಾರದು.



ಆ ಕಾಲದಲ್ಲಿ ಸಮಾಜ ಜಾತಿ ಪದ್ಧತಿ, ಮೇಲು-ಕೀಳು ಎಂಬ ಭಾವನೆಯಲ್ಲಿ ತೊಳಲಾಡುತ್ತಿತ್ತು ಎಂದು ಬೇರೆ ಹೇಳಬೇಕಾಗಿಲ್ಲ. ಅಂತಹ ಪರಿಸ್ಥಿತಿಯಲ್ಲಿ ಕೊಡಗಿನ ಗೌಡರನ್ನು ಮೇಲ್ವರ್ಗದ ಮದುವೆಯಲ್ಲಿ ಎರಡನೇ ದರ್ಜೆಯ ವ್ಯಕ್ತಿಗಳಾಗಿ ಕಾಣಲಾಗುತ್ತಿತ್ತು. ಆ ಸಮಯದಲ್ಲಿ ಮೇಲ್ವರ್ಗದ ಜನರ ಅಟ್ಟಹಾಸವನ್ನು ಪರಿಣಾಮಕಾರಿಯಾಗಿ ತಿದ್ದುಪಡಿಸಿ ಸಮಾಜದಲ್ಲಿ ಸುಧಾರಣೆ ತಂದು ಗೌಡರು ಎದ್ದು ನಿಂತು ಆತ್ಮಗೌರವದಿಂದ 'ಮಾತಾಡುವ ಪರಿಸ್ಥಿತಿಯನ್ನು ಉಂಟು ಮಾಡಿದ ಹೆಗ್ಗಳಿಕೆ ರಾಮಯ್ಯನವರಿಗೆ ಸಲ್ಲುತ್ತದೆ. ಈ ಪ್ರತಿಭಟನೆಯ ಪರಿಣಾಮವಾಗಿ ಸಮಾಜದ ಎಲ್ಲಾ ಬಾಂಧವರು ಸಾಮೂಹಿಕವಾಗಿ ಊಟ ಮಾಡುವ ಪದ್ಧತಿ ಜಾರಿಗ ಬಂದಂತಾಯಿತು.

ಸಮಾಜದ ಮಕ್ಕಳು ಪ್ರೌಢಶಾಲೆ ವಿದ್ಯಾಭ್ಯಾಸಕ್ಕಾಗಿ ಹತ್ತಾರು ಮೈಲಿಗಳಷ್ಟು ನಡೆದು ಹೋಗುವ ದುಸ್ಥಿತಿಯನ್ನು ಅರಿತ ಇವರು ಗೋಣಿಮಾರೂರು ಪ್ರೌಢಶಾಲೆಯ ಸ್ಥಾಪನೆಯಲ್ಲಿ ಪ್ರಮುಖ ಪಾತ್ರ ವಹಿಸಿದರು. ಶಾಲೆಯ ಚಂದಾ ಹಣಕ್ಕಾಗಿ ಸಮಾನ ಮನಸ್ಕರೊಡನೆ ಊರೂರು ಅಲೆದು ಪ್ರೌಢಶಾಲೆಯ ಏಳಿಗೆಗಾಗಿ ಜೀವವಿರುವವರೆಗೂ ಅವಿಶ್ರಾಂತವಾಗಿ ದುಡಿದಿದ್ದಾರೆ.

ಸತ್ಯ ಮತ್ತು ಪ್ರಾಮಾಣಿಕತೆಗಾಗಿ ಹೆಸರುವಾಸಿಯಾದ ಇವರು ಊರಿಗೆ ನ್ಯಾಯ ತೀರ್ಮಾನ ಮಾಡುವ ಪ್ರಮುಖ ವ್ಯಕ್ತಿಯೂ ಆಗಿದ್ದರು. ತನ್ನ ಪತಿಗೆ ಕಳಸಪ್ರಾಯವಾಗಿದ್ದವರೆಂದರೆ ರಾಮಯ್ಯಯನವರ ಪತ್ನಿ ಮಾಚಮ್ಮ. ಊರಿನ ಜನರ ನಂಬಿಕೆ, ಪ್ರೀತಿಗೆ ಇವರು ಪಾತ್ರರಾಗಿದ್ದಾರೆ. ಕಾಯಕಕ್ಕೆ ಇನ್ನೊಂದು ಹೆಸರು ಮಾಚಮ್ಮನವರೆಂದರೆ ತಪ್ಪಾಗಲಾರದು. ಇಡೀ ಊರಿಗೆ 'ಅವ್ವ' ಎಂದೇ ಪ್ರಸಿದ್ಧರಾದ ಈಕೆ ತನ್ನ ಗಂಡನ ಹಿಂದೆ ಕಂಕಣ ತೊಟ್ಟು ನಿಂತವರು. ಸಮಾಜ ಸೇವೆಯಲ್ಲೂ ತಮ್ಮನ್ನು ತೊಡಗಿಸಿಕೊಂಡ ಇವರು ಗಣಗೂರು ಗ್ರಾಮ ಪಂಚಾಯಿತಿಯ ಮಹಿಳಾ ಸದಸ್ಯರಾಗಿ ದುಡಿದಿದ್ದಾರೆ.

ಈ ದಂಪತಿಗಳ ಜೀವನವೇನು ಹೂವಿನ



ಹಾಸಿಗೆಯಾಗಿರಲಿಲ್ಲ. ಕಷ್ಟ ಸಂಕಷ್ಟಗಳ ಸಂಗಮ, ಸಮರಸವೇ ಜೀವನ ಎಂಬಂತೆ ಜೀವಿಸಿದರು ಇವರು. ಇವರಿಗೆ 5 ಮಕ್ಕಳು,3 ಪುತ್ರರು ಇಬ್ಬರು ಪುತ್ರಿಯರು. ಜೇಷ್ಠ ಪುತ್ರರಾದ ನಾಣಯ್ಯನವರನ್ನು ಹೆಬ್ಬಾಲೆ, ಭಾಗಮಂಡಲ ಮತ್ತು ಮಡಿಕೇರಿಯಲ್ಲಿ ಕಷ್ಟಪಟ್ಟು ಓದಿಸಿ ಸ್ನಾತಕೋತ್ತರ ಪದವಿ (ಅರ್ಥಶಾಸ್ತ್ರ) ಮಾಡಲು ಉತ್ತೇಜನ ಕೊಟ್ಟರು. 1975 ರಲ್ಲಿ ನಾಣಯ್ಯನವರಿಗೆ ಸಬ್-ಇನ್‌ಸ್ಪೆಕ್ಟರ್ ಕೆಲಸ ಸಿಕ್ಕಿದಾಗ ಈ ದಂಪತಿಗಳ ಸಂತೋಷಕ್ಕೆ ಪಾರವೇ ಇಲ್ಲ. 1982 ರಲ್ಲಿ ಕೆ.ಎ.ಎಸ್. ಪರೀಕ್ಷೆಯನ್ನು ಪಾಸು ಮಾಡಿದ ನಾಣಯ್ಯನವರು ಇಂದು ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ಅಸಿಸ್ಟೆಂಟ್ ಕಮಿಷನರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ದ್ವಿತೀಯ ಪುತ್ರರಾದ ಮೋಹನ್ ಶಿಕ್ಷಕರಾಗಿ ಗೋಣಿಮಾರೂರಿನಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಕೊನೆಯ ಪುತ್ರನಾದ ಲಿಂಗರಾಜು ಇತಿಹಾಸ ಉಪನ್ಯಾಸಕರಾಗಿ ಸರ್ಕಾರಿ ಪದವಿಪೂರ್ವ ಕಾಲೇಜು, ದೇವನಹಳ್ಳಿಯಲ್ಲಿ ಉದ್ಯೋಗನಿರತರಾಗಿದ್ದಾರೆ. ಪ್ರಥಮ ಪುತ್ರಿ ಯಶೋದಾರನ್ನು ಮೂಲೆಮಜಲು ಚಿನ್ನಪ್ಪನವರಿಗೂ (ಅವರು ಸೆಕ್ರೆಟರಿ, ಲಿಟಲ್ ಫ್ಲವರ್ ಇಂಗ್ಲಿಷ್ ಶಾಲೆ, ಬೆಂಗಳೂರು) ದ್ವಿತೀಯ ಪುತ್ರಿ ವಸಂತಿಯವರನ್ನು ಪಾಣತ್ತಲೆ ಪಳಂಗಪ್ಪ (ಎ.ಆರ್.ಸಿ.ಎಸ್) ಅವರಿಗೆ ವಿವಾಹ ಮಾಡಿಕೊಟ್ಟಿದ್ದಾರೆ.

ಊರಿನ ಕೆಲಸಗಳಲ್ಲಿ ರಾಮಯ್ಯನವರು ಎಲ್ಲರಿಗಿಂತಲೂ ಮುಂದು. ಅದರಲೂ ರಸ್ತೆ ಕೆಲಸ ಅವರಿಗೆ ಅಚ್ಚುಮೆಚ್ಚು. ಸಾರಿಗೆ ಸಂಪರ್ಕ ಒಂದು ಸಮಾಜದಲ್ಲಿ ಎಷ್ಟು ಮಹತ್ವದ ಪಾತ್ರವಹಿಸುತ್ತದೆ ಎಂದು ಅರಿತಿದ್ದ ಇವರು ರಸ್ತೆಯ ದುರಸ್ತಿಯನ್ನು ಊರಿನ ಸಹಭಾಂದವರೊಂದಿಗೆ ವರ್ಷಕ್ಕೆ ಎರಡು ಬಾರಿ ಮಾಡಿಸುತ್ತಿದ್ದರು.

ತಾವೇ ಒಂದು ಶಾಲೆಯನ್ನು ಸ್ಥಾಪನೆ ಮಾಡಬೇಕೆಂಬ ಕನಸು ಇವರದಾಗಿತ್ತು. ಈ ಕನಸು ನನಸಾಗಿದ್ದು 1990 ರಲ್ಲಿ. ತಮ್ಮ ಇಳಿಯ ವಯಸ್ಸಿನಲ್ಲಿಯೂ ತಮ್ಮ ಮಕ್ಕಳೊಡಗೂಡಿ ಬೆಂಗಳೂರಿನ ಇಂದಿರಾನಗರದಲ್ಲಿ "ಲಿಟಲ್ ಫ್ಲವರ್ ಇಂಗ್ಲಿಷ್ ಹೈಸ್ಕೂಲ್" ಅನ್ನು ಸ್ಥಾಪಿಸಿ, ಅದರ ಸ್ಥಾಪನ ಅಧ್ಯಕ್ಷರಾಗಿದ್ದರು ಈ ಮಹಾನು ಭಾವರು. ಈ ಶಾಲೆಯಲ್ಲಿ ಈಗ ಸುಮಾರು 400 ಮಂದಿ ಬಡ ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಆಟೋಟ ಸ್ಪರ್ಧೆಯನ್ನು ನಡೆಸುವುದೂ, ಭಾಗವಹಿಸುವುದೆಂದರೆ ಇವರಿಗೆ ಅತೀವ ಸಂತೋಷ. ಬೆಂಗಳೂರಿನ ಕೊಡಗು ಮತ್ತು ದ.ಕ. ಸಮಾಜಪತಿಯಿಂದ 97-98 ರಲ್ಲಿ ನಡೆದ ಆಟೋಟ ಸ್ಪರ್ಧೆಯಲ್ಲಿ ಕ್ರಿಕೆಟ್ ಟ್ರೋಫಿಯನ್ನು ಉಡುಗೊರೆಯಾಗಿ ಕೊಟ್ಟಿದ್ದಾರೆ.

ಇವರ ಪರಿಸರ ಕಾಳಜಿ ಅವಿಸ್ಮರಣೀಯವಾದುದು. ಮರ-ಗಿಡಗಳು ಮನುಷ್ಯನ ಸಂಪತ್ತು ಎಂದು ಇವರು ಬಹಳ ಹಿಂದೆಯೇ ಗಮನಿಸಿದ್ದು, ತಮ್ಮ ತೋಟದಲ್ಲಿನ ವಿವಿಧ ರೀತಿಯ ಗಿಡ-ಮರಗಳು ಇದಕ್ಕೆ ಸಾಕ್ಷಿಭೂತವಾಗಿ ನಿಂತಿವೆ. ಕಾಫಿ ತೋಟವಲ್ಲದೆ ತೆಂಗಿನ ತೋಟವನ್ನು ಮಾಡಿ ಒಬ್ಬ ಆದರ್ಶ ರೈತ ಎಂದು ಸಾಬೀತುಪಡಿಸಿದ್ದಾರೆ. ಗೆಣಸಿನ ಬೆಳೆಯಲ್ಲಿ ಎತ್ತಿದ ಕೈ ಎನಿಸಿದ ಇವರಿಗೆ ಬೆಂಗಳೂರಿನ ತೋಟಗಾರಿಕೆ ಇಲಾಖೆಯಿಂದ ಅನೇಕ ಪ್ರಶಸ್ತಿಗಳು ಬಂದಿದೆ.

ಹೀಗೆ 72 ವಸಂತಗಳನ್ನು ಕಳೆದ ಇವರು ಇದೇ 10ನೇ ಫೆಬ್ರವರಿ 1998 ರಲ್ಲಿ ಇಹಲೋಕವನ್ನು ತ್ಯಜಿಸಿದ ಇವರಿಗೆ 'ಕೊಡಗು ಸಂಗಾತಿ' ಈ ಮಹತ್ಕಾರ್ಯವನ್ನು ಜನಾಂಗದ ಸರ್ವರಿಗೂ ತಿಳಿಯಪಡಿಸುತ್ತಲೂ ಮತ್ತು ತನ್ನ ಹೃದಯಾಂತರಾಳದ ಶ್ರದ್ಧಾಂಜಲಿಯನ್ನು ಶ್ರೀಯುತರಿಗೆ ಅರ್ಪಿಸುತ್ತದೆ.

ವರದಿ : ಕೆ.ಕೆ. ಸುಮಿತ್ರ, ಬೆಂಗಳೂರು

**ಕೊಡಗು ಸಂಗಾತಿ**

ಬಾಳಲಿ, ಬೆಳಗಲಿ, ಕೊಡಗು ಸಂಗಾತಿ,
ಗೌಡರ ಸಂಸ್ಕೃತಿ ಎತ್ತಿ ಹಾಡಲಿ ಸಂಗಾತಿ,
ಚಿರಾಯುವಾಗಲಿ ಕೊಡಗು ಸಂಗಾತಿ,
ಶುಭ ಸಂಭ್ರಮವಾಗಲಿ ಕೊಡಗು ಸಂಗಾತಿಗೆ!

ಕುದುಪಜೆ ಅಶೋಕ್, ಮದೆನಾಡು

**ಹಾರೈಕೆ**

"ಮೋಹಕ್ಕಾಗಿ ಕನ್ನಡ ಕಲಿಯಿರಿ
ವ್ಯವಹಾರಕ್ಕಾಗಿ ಇಂಗ್ಲೀಷ್ ಕಲಿಯಿರಿ
ರಾಷ್ಟ್ರಕ್ಕಾಗಿ ಹಿಂದಿ ಕಲಿಯಿರಿ
ಹಾಗೆಯೇ ನಮ್ಮ ಭಾಷೆಯ ಉಳಿವುಗಾಗಿ
ಅರೆಭಾಷೆ ಕಲಿಯಿರಿ"

ನಂಗಾರು ಕಿರಣ್ ಕೀರ್ತಿಪ್ರಸಾದ್
ಯಡವಾರೆ ಗ್ರಾಮ, ಸೋಮವಾರಪೇಟೆ



# ಆಂತರಿಕ ಮತ್ತು ಬಾಹ್ಯ ಸೌಂದರ್ಯ

ಒಬ್ಬ ವ್ಯಕ್ತಿಯ ಆಂತರಿಕ ಚಿಂತನೆಯು ಯಾವ ಬಗೆಯದು ಎಂದು ತಿಳಿಯಲು ಅವನ (ಅವಳ) ಮುಖವನ್ನು ವೀಕ್ಷಿಸಿದರೆ (ಸೂಕ್ಷ್ಮವಾಗಿ) ತಿಳಿಯುವುದು. ಯಾಕೆಂದರೆ "ಮುಖ" ವೆಂಬುದು ಪ್ರತಿಯೊಬ್ಬ ವ್ಯಕ್ತಿಯ ಅಂತರಂಗಕ್ಕೆ ಹಿಡಿದ ಕನ್ನಡಿಯಾಗಿದೆ. ಅದು ಹೇಗೆಂದರೆ, ಒಬ್ಬ ವ್ಯಕ್ತಿ ಸಂತೋಷಗೊಂಡಾಗ ಅವನ (ಅವಳ) ಮುಖದಲ್ಲಿ ಯಾವ ರೀತಿಯ ವಿಕಾಸವಿರುತ್ತದೋ ಅದಕ್ಕೆ ತದ್ವಿರುದ್ಧವಾಗಿ ದುಃಖದಲ್ಲಿದ್ದಾಗ ಅಥವಾ ದುರಾಲೋಚನೆಯಲ್ಲಿದ್ದಾಗ ಕಾಣಬಹುದು.

ಉದಾಹರಣೆಗೆ ಒಬ್ಬ ಮನುಷ್ಯ ಸಂತೋಷಗೊಂಡಿದ್ದಾಗ ಅಥವಾ ಒಳ್ಳೆಯ ಆರೋಗ್ಯಕರ ಚಿಂತನೆಯಲ್ಲಿದ್ದಾಗ ಅವನ (ಅವಳ) ಮುಖದಲ್ಲಿ ಗಂಭೀರ ಅಥವಾ ನಗುವಿನ ಛಾಯೆ ಕಂಡರೂ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಕಣ್ಣಲ್ಲಿ ಪ್ರಕಾಶ, ನೇರವಾದ ಹುಬ್ಬು, ನೆರಿಗೆಗಳಿಲ್ಲದ ಶಾಂತವಾದ, ವಿಶಾಲವಾದ ಹಣೆಯ ಭಾಗ, ಮೂಗಿನ ತುದಿಯಲ್ಲಿ ಹೊಳಪು, ಶುಭ್ರವಾದ, ಸ್ವಲ್ಪ ಉಬ್ಬಿದಂತೆಯೇ ಎರಬಿರತೆ ಕಪೋಲಗಳು, ಬಿರಿದ ತುಟಿಗಳು (ಕೆಲವರ ತುಟಿಯಂಚಿನಲ್ಲಿ ಕಿರುನಗು ಮತ್ತು ಗುಳಿಗಳು) ತುಂಬಿದ ಗಲ್ಲ, ಒಟ್ಟಿನಲ್ಲಿ ಹೇಳುವುದಾದರೆ, ಮುಖದಲ್ಲಿ ಮುಗುಳ್ನಗೆಯ ಹೊಳಪು ತುಂಬಿ ನಮ್ಮನ್ನು ನೋಡಬೇಕೆಂಬ ಭಾವನೆ ನೋಡುವವರಲ್ಲಿ ಮೂಡುವುದು. ಇಂಥವರ ದೇಹದ ಪ್ರತಿಯೊಂದು ಅವಯವಗಳು ಚುರುಕಾಗಿ ಮತ್ತು ಸಮರ್ಪಕವಾಗಿ ಕೆಲಸ ನಿರ್ವಹಿಸುವುದರಿಂದ ಇವರ ಆಂತರಿಕ ಆರೋಗ್ಯವು ಚೆನ್ನಾಗಿದ್ದು, ನೋಡುವವರಿಗೂ ಆರೋಗ್ಯವಂತರಾಗಿ, ಸುಂದರವಾಗಿ ಕಾಣಿಸುತ್ತಾರೆ.

ಆದರೆ ದುರಾಲೋಚನೆ ಅಥವಾ ತೀವ್ರವಾದ ದುಃಖಕ್ಕೆ ಒಳಗಾದವರ ಮುಖಭಾವನೆಯು ಇದಕ್ಕೆ ವಿರುದ್ಧವಾಗಿರುತ್ತದೆ. ನೆರಿಗಟ್ಟಿದ, ಸಂಕುಚಿತಗೊಂಡ ಹಣೆ, ಗಂಟಿಕ್ಕಿದ ಹುಬ್ಬುಗಳು, ಒಳಸರಿದ ಕಣ್ಣುಗಳು, ಹೊಳಪಿಲ್ಲದ ಮೂಗು, ಮಾಸಿದ ಜೋತುಬಿದ್ದ ಕೆನ್ನೆಗಳು, ಬಿಗಿದ ತುಟಿಗಳು ಮತ್ತು ಸ್ನಾಯು[illegible] ಬಣ್ಣಗೆಟ್ಟ ಗಲ್ಲ ಒಟ್ಟಿನಲ್ಲಿ ತೇಜೋಹೀನವಾದ (ಕಳೆಗುಂದಿದ) ಮುಖಭಾವವನ್ನು ಕಾಣಬಹುದು. [illegible] ಅದುರುವ ಹುಬ್ಬು ಮತ್ತು ತುಟಿಗಳು [illegible] ತೀಕ್ಷ್ಣವಾಗಿರುತ್ತವೆ. ಕೆಲವರಿಗೆ ಮೂಗಿನ ತುದಿಯು, ಕೆನ್ನೆಯು ಕೆಂಪುಕೆಂಪಾಗಬಹುದು. ಈ ರೀತಿ ಅಸ್ತವ್ಯಸ್ತವಾಗಿರುವ ಮನೋಭಾವನೆ [illegible] ಸರಿಯಾಗಿ ಜೀರ್ಣವಾಗುವುದಿಲ್ಲ. ಪಿತ್ತಜನಕಾಂಗದ [illegible] ಕೆಲಸದಿಂದಾಗಿ (ಅತಿ ಹೆಚ್ಚಾಗಿ ಪಿತ್ತ ರಸದ ಒಸರುವಿಕೆಯಿಂದ) ಎದೆಯ ಭಾಗದಲ್ಲಿ ಮತ್ತು ಜಠರದಲ್ಲಿ ಉರಿ ಕಾಣಿಸಿಕೊಳ್ಳುತ್ತದೆ. ಇದೇ [illegible] ಗ್ಯಾಸ್ಟ್ರಿಕ್ [illegible] ಅಲ್ಸರ್ (ಹುಣ್ಣು)ಗೆ ತಿರುಗಬಹುದು. [illegible] ಕ್ರಿಯೆಗಳೇ ತೊಂದರೆಗೀಡಾಗುವುದು. ರಕ್ತನಾಳಗಳು ಸೆಟೆದುಕೊಂಡು ರಕ್ತ ಪರಿಚಲನೆಯಲ್ಲಿ ವ್ಯತ್ಯಾಸವಾಗಬಹುದು. ಇದು ರಕ್ತದ ಒತ್ತಡ (ಬ್ಲಡ್ ಪ್ರೆಶರ್) ಮತ್ತು ಹೃದಯಾಘಾತ ಸಮಸ್ಯೆಗಳಿಗೆ ಎಡೆಮಾಡಬಹುದು. ಅಲ್ಲದೆ ತಲೆನೋವು ಮುಂತಾದ ಖಾಯಿಲೆಗಳಿಗೂ ತುತ್ತಾಗಬಹುದು. ಈ ತರಹದ ಅವ್ಯವಸ್ಥೆಗೆ ಮನುಷ್ಯನ [illegible] ಭಾವನೆಯೇ ಹೆಚ್ಚಾಗಿ ಕಾರಣವಾಗಿರುತ್ತದೆ. ಇಂತಹವುಗಳನ್ನು ಒಂದು ರೀತಿಯ ಮಾನಸಿಕ ರೋಗಗಳೆಂದೇ ಹೇಳಬಹುದು. ಇಂತಹ ಅನಾರೋಗ್ಯಕರ ಚಿಂತನೆಗಳಿಗೊಳಗಾದವರು ತಮ್ಮ [illegible] ಸೌಂದರ್ಯವನ್ನು ಕಾಪಾಡಿಕೊಳ್ಳಲು ಸೌಂದರ್ಯ ಗೃಹಗಳಿಗೆ ಭೇಟಿ ಕೊಟ್ಟರೂ ಸಹ ಇವರ ಸೌಂದರ್ಯ ಹೆಚ್ಚುವುದಿಲ್ಲ. ಎಲ್ಲಿಯವರೆಗೆ ಇವರು ತಮ್ಮ ಆಂತರಿಕ ಸೌಂದರ್ಯವನ್ನು ಬೆಳೆಸಿಕೊಳ್ಳುವುದಿಲ್ಲವೋ ಅಲ್ಲಿಯವರೆಗೆ [illegible]. ಈ ಆಂತರಿಕ ಸೌಂದರ್ಯವನ್ನು ಬೆಳೆಸಿಕೊಳ್ಳುವುದು ಹೇಗೆ ಎಂದು ನೋಡೋಣ.

([illegible] ಸ್ನೇಹ, ಗೌರವ, ಕರುಣೆ, ಸ್ವಾಭಿಮಾನ ಮುಂತಾದ [illegible] ಆಂತರಿಕ ಸೌಂದರ್ಯ [illegible] ಬೇರೆಯವರ ಬಗ್ಗೆ ಚಿಂತನೆ ಮಾಡುವಾಗ [illegible]) ಮಾಡಬೇಕು. ಸತ್ಸಂಗವನ್ನು (ಒಳ್ಳೆಯವರ) ಮಾಡಬೇಕು. ನಮ್ಮಿಂದ ಆದಷ್ಟು ಬೇರೆಯವರಿಗೆ (ಒಳ್ಳೆಯದು ಮಾಡುವ ಮನಸ್ಸಿಲ್ಲದಿದ್ದರೆ) ತೊಂದರೆ ಆಗದ ಹಾಗೆ ನಡೆದುಕೊಳ್ಳಬೇಕು. ಚಾಡಿ ಮಾತುಗಳನ್ನು ಕೇಳಬಾರದು ಮತ್ತು ಪ್ರೋತ್ಸಾಹಿಸಬಾರದು. ಬೇರೆಯವರ ಬಗ್ಗೆ ಹಗುರವಾಗಿ ಮಾತನಾಡಬಾರದು. ಬಡವ ಬಲ್ಲಿದರೆಲ್ಲರನ್ನೂ ಸಮಾನವಾಗಿ ಕಾಣಬೇಕು ಮತ್ತು ಗೌರವಿಸಬೇಕು. ಹತ್ತು ಮಂದಿಯೊಡನೆ ಸೇರಿದಾಗ ಆತ್ಮೀಯತೆಯಿಂದ, ಸ್ನೇಹ, ಭಾವನೆಯಿಂದ ನಡೆದುಕೊಳ್ಳಿ. ಹಿತಮಿತವಾಗಿ ಮಾತನಾಡುವುದು ಎಲ್ಲರಿಗೂ ಒಳ್ಳೆಯದು. ಸದಾ ನಗುಮುಖವಿರಲಿ, ಯಾಕೆಂದರೆ ನಿಮ್ಮ ನಗುಮುಖಕ್ಕೆ ಬೇರೆಯವರ ಅಂತರಂಗದ ನೋವನ್ನು ಕ್ಷಣ ಕಾಲವಾದರೂ ಮರೆಸಬಲ್ಲ ಶಕ್ತಿ ಇರುತ್ತದೆ. ಇದಕ್ಕೆ ನೀವೇನೂ ಹಣ ತೆರಬೇಕಾಗಿಲ್ಲ. ಬದಲಾಗಿ ಇದರಿಂದ ನಿಮಗೆ ಹೆಚ್ಚು ಲಾಭವಿದೆ. ನಿಮ್ಮ ಮುಖದ ಸೌಂದರ್ಯವನ್ನು ಹೆಚ್ಚಿಸಿಕೊಳ್ಳಬಹುದು. [illegible] ಹಸನ್ಮುಖಿಯಾಗಿರುವ [illegible] ಮಾತನಾಡುತ್ತಾರೆ. [illegible] ಯಾರಾದರೂ ತಮ್ಮ ನೋವನ್ನು ಹೇಳಿಕೊಂಡರೆ ಅಸಡ್ಡೆ ಮಾಡದೆ, ಶಾಂತಿಯಿಂದ ಕೇಳಿ, ತಮಗೆ [illegible] ಸಾಂತ್ವನದ ನುಡಿಗಳನ್ನಾಡಿ [illegible] ನಿಮಗೆ ಹಿರಿತನವೂ ಲಭಿಸಿದಂತಾಗುತ್ತದೆ. ಇದರಿಂದ ನಿಮ್ಮ ವ್ಯಕ್ತಿತ್ವ ವಿಕಾಸವಾಗುತ್ತದೆ. ಆತ್ಮ ಬಲ ಧೃಡವಾಗುತ್ತದೆ. ಬೇರೆಯವರ ಅಥವಾ ನೆರೆಹೊರೆಯವರ ವಿಚಾರಗಳಲ್ಲಿ [illegible]ಸಿಕೊಳ್ಳಬೇಡಿ. ಬೇಡದ ವಿಚಾರಗಳತ್ತ ಗಮನ ಕೊಡಬೇಡಿ. ಇದನ್ನು ಇಂದ್ರಿಯ ನಿಗ್ರಹ ಎಂದು ಹೇಳುತ್ತಾರೆ. ಗಾಂಧೀಜಿಯವರ ಮೂರು ಮಂಗಗಳ



ಚಿತ್ರವನ್ನು ಮತ್ತು ಅವುಗಳ ತತ್ವವನ್ನು ನೆನಪಿಸಿಕೊಳ್ಳಿ. ಸುಖ ದುಃಖಗಳೆಂಬುದು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಕತ್ತಲು ಕಳೆದ ಮೇಲೆ ಬೆಳಕು, ಹೀಗೆ ಒಂದರ ಹಿಂದೊಂದು ಮಾನವರಿಗೆ ತಪ್ಪಿದ್ದಲ್ಲ. ಆದ್ದರಿಂದ ಸುಖವನ್ನು ಹೇಗೆ ನಗು ನಗುತ್ತಾ ಸ್ವಾಗತಿಸುವಿರೊ ದುಃಖವನ್ನು ಅದೇ ರೀತಿ ಪರಿಗಣಿಸಿರಿ. ಕೊರಗಿದರೆ, ಚಿಂತಿಸಿದರೆ ದುಷ್ಪರಿಣಾಮಗಳು ತಪ್ಪಿದ್ದಲ್ಲ. ಉತ್ತಮ ನಡೆ ನುಡಿಗಳ ಜೊತೆಗೆ ಒಳ್ಳೆಯ ಊಟದ ಅಭ್ಯಾಸ ಎಂದರೆ ಊಟವನ್ನು ಹಿತಮಿತವಾಗಿ ಮಾಡಿರಿ. ಮತ್ತು ಎರಡು ಊಟಗಳ ನಡುವಿನ ಅಂತರ ನಾಲ್ಕು ಗಂಟೆಗಳ ಅವಧಿ ಇರಲಿ. ಕಾಲಕಾಲಕ್ಕೆ ಸಿಗುವ ಹಣ್ಣು ತರಕಾರಿಗಳನ್ನು ಹೆಚ್ಚಾಗಿ ಬಳಸಿ. ಇದರಿಂದ ದೇಹಕ್ಕೆ ಪ್ರಕೃತಿ ಚಿಕಿತ್ಸೆ ದೊರೆತಂತಾಗುವುದು. ಕನಿಷ್ಠ ತಿಂಗಳಿಗೊಂದು ಬಾರಿ ಅಥವಾ ಹದಿನೈದು ದಿನಗಳಿಗೊಂದು (ಏಕಾದಶಿ) ಉಪವಾಸ ಆಚರಿಸಿದರೆ ಒಳ್ಳೆಯದು. ಇದರಿಂದ ಆರೋಗ್ಯವು ಚೆನ್ನಾಗಿರುವುದು. "ಊಟ ಬಲ್ಲವನಿಗೆ ರೋಗವಿಲ್ಲ ಮಾತು ಬಲ್ಲವನಿಗೆ ಜಗಳವಿಲ್ಲ." ಎಂಬ ನಾಣ್ಣುಡಿಯು ಎಷ್ಟು ಸಮಂಜಸವಾಗಿದೆಯಲ್ಲವೇ?

ಇಷ್ಟೇ ಪ್ರಮುಖವಾದ ಇನ್ನೊಂದು ಅಂಶ, ನಿಮ್ಮ ಮನೆ ಮತ್ತು ಸುತ್ತ ಮುತ್ತಲಿನ ಪರಿಸರವನ್ನು ಚೊಕ್ಕಟವಾಗಿ ಇಡುವುದು. ಇದಕ್ಕೆ ಮನೆಯ ಮಗುವಿನಿಂದ ಹಿಡಿದು ಪ್ರತಿಯೊಬ್ಬ ಸದಸ್ಯರ ಸಹಕಾರ ಅತಿ ಮುಖ್ಯ. ರಾತ್ರಿ ಆದಷ್ಟೂ ಬೇಗ ಮಲಗಿ ಬೆಳಿಗ್ಗೆ ಬೇಗ ಏಳುವ ಅಭ್ಯಾಸ ಬಹಳ ಒಳ್ಳೆಯದು. ಬೆಳಿಗ್ಗೆ ಎದ್ದ ಕೂಡಲೆ ಹಸಿರು ವೀಕ್ಷಣೆ ಕಣ್ಣಿಗಷ್ಟೇ ಅಲ್ಲ ನಿಮ್ಮ ಮನಸ್ಸಿಗೂ ಆಹ್ಲಾದವನ್ನು ನೀಡುವುದು. ವಾಕಿಂಗ್ ಇದ್ದರೆ ಇನ್ನು ಒಳ್ಳೆಯದು. ಹೀಗೆ ಬೇಕಾದಷ್ಟೂ ಒಳ್ಳೆಯ ಗುಣಗಳನ್ನು ಬೆಳೆಸಿಕೊಳ್ಳುವ ಪ್ರಯತ್ನ ಮಾಡಿದರೆ ಖಂಡಿತ ಯಶಸ್ಸು ದೊರೆಯುವುದು.

ನವರಸಗಳು ಮನುಷ್ಯನ ಜೀವನದಲ್ಲಿ ಸಾಮಾನ್ಯವಾಗಿ ಬರುವುದು. ಆದರೆ ಅವುಗಳಲ್ಲಿರುವ ದುರ್ಗುಣಗಳನ್ನು ಬಿಟ್ಟು ಹಂಸ ಕ್ಷೀರ ನ್ಯಾಯದಂತೆ ಸದ್ಗುಣಗಳನ್ನು ಮಾತ್ರ ರೂಢಿಸಿಕೊಂಡರೆ, ನಿಮ್ಮ ಆಂತರಿಕ ಸೌಂಧರ್ಯದ ಜೊತೆಗೆ ಬಾಹ್ಯ ಸೌಂದರ್ಯವನ್ನು ಆರೋಗ್ಯವನ್ನು ಕಾಪಾಡಿ ಕೊಳ್ಳಬಹುದು. ಇದಕ್ಕಾಗಿ ಹಣ ತೆತ್ತು ಸೌಂದರ್ಯ ಗೃಹಗಳಿಗಾಗಲಿ, ಆರೋಗ್ಯ ಕೇಂದ್ರಗಳಿಗಾಗಲಿ ಅಲೆಯಬೇಕಾಗಿಲ್ಲ. ನಿಮ್ಮ ಮನಸ್ಸನ್ನು ಸ್ವಚ್ಛವಾದ ಕನ್ನಡಿಯ ಹಾಗೆ ಮಾನಸಸರೋವರದ ಹಾಗೇ (ಮಾನಸ ಸರೋವರದಲ್ಲಿ ಅಲೆಗಳೆ ಇಲ್ಲವಂತೆ) ಇಟ್ಟುಕೊಳ್ಳಿ. ಅಂಗೈ ಹುಣ್ಣಿಗೆ ಕನ್ನಡಿ ಯಾಕೆ ಬೇಕು? ನಿಮ್ಮ ನಿಮ್ಮ ಮನೋ ದೌರ್ಬಲ್ಯ ಏನೆಂದು ನೀವೇ ಅರಿತುಕೊಂಡು ಅದಕ್ಕೆ ಬೇಕಾದ ಔಷಧಿಯನ್ನು ಕೂಡ ನೀವೇ ಸಿದ್ಧಪಡಿಸಿಕೊಂಡು ಸೌಂದರ್ಯದ ಜೊತೆಗೆ ಆರೋಗ್ಯವನ್ನು ಪಡೆಯಿರಿ.

**☆ ಬಿಟ್ಟೀರ ಚೋಂದಮ್ಮ ಶಂಭು, ಬೆಂಗಳೂರು**

## ಜೀವನವೆಂದರೆ......

ಜೀವನ ಎಂದರೇನು? ಇದಕ್ಕೆ ನಿಖರವಾದ ಉತ್ತರ ಸಿಗುವುದು ಕಷ್ಟ. ಜೀವನ ಸುಖ-ದುಃಖದಿಂದ ಕೂಡಿದುದು.

ಜೀವನ ಒಂದು ಹರಿಯುವ ನದಿ. ಇದು ಹರಿಯುವಾಗ ಅನೇಕ ಅನುಭವಗಳಿಗೆ, ಸಂದರ್ಭಗಳಿಗೆ ಅವಕಾಶ ಮಾಡಿ ಕೊಡುತ್ತದೆ. ಜೀವನ ನಿಂತ ನೀರಲ್ಲ. ಜೀವನ ಒಂದು ಪ್ರಯಾಣ. ನಾವು ಪ್ರಯಾಣಿಕರು. ಈ ಚಿಕ್ಕ ಪ್ರಯಾಣದ ಕಾಲದಲ್ಲಿ ಜೀವನವನ್ನು ಸಾಧ್ಯವಾದಷ್ಟು ವಿಸ್ತರಿಸಿಕೊಳ್ಳಲು ಪ್ರಯತ್ನಿಸಬೇಕು. ದೇವರಿರುವೆಡೆ ದೆವ್ವಗಳಿರುವಂತೆ, ಒಳ್ಳೆಯದಿರಬೇಕಾದರೆ ಕೆಟ್ಟದು ಇರಲೇಬೇಕು. ಜೀವನ ಇವೆರಡರ ಸಮ್ಮಿಶ್ರಣದಂತೆ. ಜೀವನ ಒಂದು ನಾಟಕರಂಗ. ನಾವೇ ಪಾತ್ರಧಾರಿಗಳು. ದೇವರೇ ನಿರ್ದೇಶಕ. ಪ್ರಪಂಚವೇ ರಂಗಭೂಮಿ. ಬೆಳಕು ಕತ್ತಲನ್ನು ಕತ್ತಲು ಬೆಳಕನ್ನು ನುಂಗುತ್ತದೆ. ಹಾಗೆಯೇ ಮಾನವ ಜೀವನವನ್ನು ಜೀವನ ಮಾನವನನ್ನು ಉಳಿಸುತ್ತದೆ, ಅಳಿಸುತ್ತದೆ.

ಜೀವನ ಹಾಗೂ ಜೀವಿ ಎರಡೂ ಒಟ್ಟಾಗಿ ಹುಟ್ಟುತ್ತವೆ. ಜೀವಿ ಭ್ರೂಣವಾಗಿ ಬೆಳೆಯುವಾಗಲೇ ಅದರ ಸುತ್ತ ಜೀವನದ ಬಲೆ ಹರಡಿಕೊಂಡಿರುತ್ತದೆ. ಜೀವಿಸುವಾಗ ಒಂದು ಜೀವಿ ತನಗೆಷ್ಟು ದಕ್ಕುತ್ತದೋ ಅಷ್ಟನ್ನು ಹುಟ್ಟು ಸಾವಿನ ಅಳತೆಗೋಲಿಟ್ಟುಕೊಂಡು ಜೀವಿಸುತ್ತದೆ. ಜೀವನ ಕ್ಷಣಿಕ, ಜೀವನ ನೀರ ಮೇಲಿನ ಗುಳ್ಳೆ, ಇದು ಸ್ಥಿರವಲ್ಲ. ಇದು ಕೆಲವೇ ದಿನ ಇರಬಹುದಾದ ವಸ್ತು.

ಜೀವನ ಜ್ಯೋತಿ ಇದ್ದ ಹಾಗೆ. ಯಾವಾಗ ಆರುತ್ತದೆ ಎನ್ನುವುದು ಗೊತ್ತಿಲ್ಲ. ಒಳ್ಳೆಯವನ ಜೀವನ ಮೌಲ್ಯ ಹೂವಾಗಬಹುದು. ಕೆಟ್ಟವನ ಜೀವನ ಮೌಲ್ಯ ಮುಳ್ಳಾಗಬಹುದು. ಕುವೆಂಪು ಅವರು ಹೇಳಿರುವಂತೆ - " ಮತ್ತೆರಡನೆ ಶತಮಾನಂ ನಾಳೆಯ ಹೊತ್ತಾರೆ ಮೂಡುತ್ತದೆ. ಹೊಸ ಚೇತನ ಎತ್ತೆತ್ತಲು ತೋರೆ ...." ನಮ್ಮ ಜೀವನವೂ ಹಾಗೆಯೇ ಇರಬೇಕು ಅಲ್ಲವೇ?

**☆ ಹುಲಿಮನೆ ರಮೇಶ್, ಮೈಸೂರು**



# ವ್ಯಕ್ತಿ ಪರಿಚಯ : ಮೈಸೂರಿನ ಮಾಜಿ ಮೇಯರ್ "ವಾಸು"

ಕರ್ನಾಟಕದ ನಕ್ಷೆಯಲ್ಲಿ ಮೈಸೂರಿಗೆ ವಿಶಿಷ್ಟವಾದ ಸ್ಥಾನಮಾನವಿದೆ. ಮೈಸೂರು ಸುಂದರ ಉದ್ಯಾನವನಗಳ ನಗರ, ಸೌಂದರ್ಯದ ಆಗರವೂ ಕೂಡ. ಯದುವಂಶಿಗಳಾಳಿದ ಈ ನಗರ ಭಾರತದ ಪ್ರಸಿದ್ಧ ಪ್ರೇಕ್ಷಣೀಯ ಸ್ಥಾನಗಳಲ್ಲಿ ಒಂದು. ತಾಯಿ ಚಾಮುಂಡಿ ಮಾತೆಯ ನೆಲವೀಡು ಇದು. ಪ್ರವಾಸಿಗರ ಮನದಲ್ಲಿ ಅಚ್ಚೊತ್ತುವ ಅರಮನೆ, ಗುರುಮನೆಗಳು ಇಲ್ಲಿವೆ. ಮೈಸೂರು ಮಲ್ಲಿಗೆ, ಚಿಗುರು ವೀಳ್ಯೆದೆಲೆ , ರಸಬಾಳೆ ಇವೆಲ್ಲಾ ಈ ನಗರದ ಕೊಡುಗೆಯೆ. ಹಾಗೆಯೇ ಸಮಾಜದ ಎಲ್ಲಾ ಕ್ಷೇತ್ರಗಳಿಂದಲೂ ವಿಶಿಷ್ಟ ವ್ಯಕ್ತಿತ್ವದ ಮಹಾನ್ ವ್ಯಕ್ತಿಗಳನ್ನು ಈ ನಾಡಿಗೆ, ದೇಶಕ್ಕೆ ನೀಡಿದ ಕೀರ್ತಿ ಈ ನಗರಕ್ಕೆ ಸಲ್ಲುತ್ತದೆ.

ಇಂತಹ ಪ್ರಸಿದ್ಧಿ ಪಡೆದ ನಗರದ ರಾಜಕಾರಣದಲ್ಲಿ ಶ್ರೀವಾಸುರವರ ಹೆಸರಿಗೆ ವಿಶಿಷ್ಟ ಸ್ಥಾನವಿದೆ. ಅವರು ಈ ನಗರದ ಧ್ರುವತಾರೆ ಎಂದರು ತಪ್ಪಾಗಲಾರದು ವಿದ್ಯಾರ್ಥಿನಾಯಕರಾಗಿ, ಸಹಕಾರಿ ಧುರೀಣರಾಗಿ, ನಗರ ಪಾಲಿಕೆಯ ನಾಯಕರಾಗಿ, ರಾಜಕಾರಣದಲ್ಲಿ ಒಂದೊಂದೇ ಮೆಟ್ಟಿಲೇರಿ ರಾಜ್ಯ ಮಟ್ಟದಲ್ಲಿ ಹೆಸರು ಮಾಡಿದ ವಾಸುರವರ ಬಗ್ಗೆ ಬರೆಯಲು ನಿಜಕ್ಕೂ ಹೆಮ್ಮೆ ಎನಿಸುತ್ತದೆ.

1952 ರಲ್ಲಿ ಮೈಸೂರಿನ ಒಂದು ಸಾಮಾನ್ಯ ಒಕ್ಕಲಿಗ ಕುಟುಂಬದ ಚನ್ನಯ್ಯ ಲಕ್ಷ್ಮಮ್ಮ ದಂಪತಿಗಳ ಮಗನಾಗಿ ಜನಿಸಿದ ವಾಸುರವರು ಬಾಲ್ಯದಿಂದಲೇ ತಮ್ಮ ನಾಯಕತ್ವದ ಗುಣವನ್ನು ಎಲ್ಲಾ ರಂಗಗಳಲ್ಲೂ ಗುರುತು ಮಾಡುತ್ತಾ ಬೆಳೆದವರು. ಪ್ರಾಥಮಿಕ ಹಂತದಿಂದಲೇ ನಾಯಕತ್ವ ಗುಣ ರೂಪಿಸಿಕೊಂಡು ಬೆಳೆದ ವಾಸುರವರು ಸಮಾಜ ಶಾಸ್ತ್ರದಲ್ಲಿ ಎಂ.ಎ. ಪದವಿದರರು.

ತಮ್ಮ ಏಳನೇ ವಯಸ್ಸಿನಲ್ಲಿ ಕೊಡಗಿನ ಅರೆಭಾಷಿಕಾ ಗೌಡ ಜನರೊಡನೆ ಬೆಳೆದು, ಅವರ ಸ್ನೇಹ ಸಂಪಾದಿಸಿ, ಕೊಡಗು ಅರೆಭಾಷೆಗೌಡರಿಗೆ ವಾಸುರವರು ಅಕ್ಕರೆಯವರಾಗಿ ಹೋದರು.

ಅವರ ಬಾಲ್ಯದ ಬೆಳವಣಿಗೆಯೆಲ್ಲಾ ನಮ್ಮ ಈ ಸಮಾಜದ ನಡುವೆಯೇ. ಇದು ಅವರಿಗೆ ಹೆಮ್ಮೆಯ ವಿಷಯ. ಅಕ್ಕರೆ, ಪ್ರೀತಿ, ವಿಶ್ವಾಸಗಳ ಘಾಡತೆ ಸಂಬಂಧವಾಗಿ ಮಾರ್ಪಟ್ಟಿತ್ತು. ನಂತರ ಇವರು ದಕ್ಷಿಣ ಕನ್ನಡದ ಪುತ್ತೂರಿನ ಗೌಡ ಕುಟುಂಬದ ಸಕಲ ಗೌಡ ಸಂಪನ್ನೆ ಕುಮಾರಿ ಲಲಿತಾರವರನ್ನು ತಮ್ಮ ಬಾಳಸಂಗಾತಿಯಾಗಿ ಸ್ವೀಕರಿಸಿದರು. ಪ್ರತಿಯೊಬ್ಬ ಗಂಡಸಿನ ಯಶಸ್ಸಿನ ಹಿಂದೆ ಹೆಣ್ಣಿನ ಸಹಕಾರ ಇದ್ದೇ ಇರುತ್ತದೆ. ಹಾಗೆಯೇ ವಾಸುರವರ ಯಶಸ್ಸಿನ ಹಿಂದೆ ಶ್ರೀಮತಿ ಲಲಿತಾ ವಾಸುರವರ ಸಹಕಾರವನ್ನು ಮರೆಯುವ ಹಾಗಿಲ್ಲ. ಗಂಡನ ಇಷ್ಟ, ಅಭಿಷ್ಟಗಳನ್ನು ಅರ್ಥಮಾಡಿಕೊಂಡು ಆತನಿಗೆ ನೆರಳಿಗೆ ನೆರಳಾಗಿ ನಡೆಯುವ ಗೃಹಿಣಿಯರು ನಮ್ಮಲ್ಲಿ ಎಷ್ಟು ಮಂದಿ? ಆದರೆ ಈ ಗುಣವನ್ನು ನಾವು ಶ್ರೀಮತಿ ಲಲಿತಾರವರಲ್ಲಿ ಕಾಣುತ್ತೇವೆ. ಅನ್ಯೋನ್ಯ ದಾಂಪತ್ಯದ ಈ ದಂಪತಿಗಳಿಗೆ ಮೂರು ಗಂಡು ಮಕ್ಕಳು. ಇದೊಂದು ಆದರ್ಶನೀಯ ದಾಂಪತ್ಯ ಹಾಗೂ ಆದರ್ಶಮಯ ಕುಟುಂಬ.



ವಿದ್ಯಾರ್ಥಿ ದೆಸೆಯಲ್ಲೇ ನಾಯಕತ್ವ ಗುಣ ರೂಡಿಸಿಕೊಂಡ ವಾಸುರವರು ತಮ್ಮ ಚಿಕ್ಕ ವಯಸ್ಸಿನಲ್ಲಿಯೇ ಸಹಕಾರ ಕ್ಷೇತ್ರಕ್ಕೆ ಕಾಲಿರಿಸಿದವರು. ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕಿಗೆ ನಿರ್ದೇಶಕರಾಗಿ, ಉಪಾಧ್ಯಕ್ಷರಾಗಿ, ತಮ್ಮ ಚಿಕ್ಕ ವಯಸ್ಸಿನಲ್ಲಿಯೇ ಆಯ್ಕೆಯಾದ ಖ್ಯಾತಿ ಇವರದು. ಕಾಂಗ್ರೆಸ್ ಪಕ್ಷದ ಯುವನಾಯಕನಾಗಿ ಪಕ್ಷದ ಮಂಚೂಣಿಯಲ್ಲಿ ದುಡಿದ ಇವರು, ನಂತರ ಮೈಸೂರು ನಗರ ಯುವ ಕಾಂಗ್ರೆಸ್ ಅಧ್ಯಕ್ಷರಾಗಿ ಪಾದರಸದಂತೆ ಕೆಲಸ ಮಾಡಿ ಜನ ಸಂಘಟಿಸಿ ಪಕ್ಷಕ್ಕಾಗಿ ದುಡಿದವರು. ತತ್ಫಲವಾಗಿ1983 ರಲ್ಲಿ ಮೈಸೂರು ಮಹಾನಗರ ಪಾಲಿಕೆಯ ಸದಸ್ಯರಾಗಿ ಅತಿ ಹೆಚ್ಚು ಮತಗಳಿಂದ ಚುನಾಯಿಸಲ್ಪಟ್ಟು ವಿರೋಧ ಪಕ್ಷದ ನಾಯಕರಾಗಿ ಆ ಸ್ಥಾನಕ್ಕೆ ಗೌರವ ತಂದುಕೊಟ್ಟವರು. ಅಷ್ಟರಲ್ಲೇ ಮೈಸೂರಿನಲ್ಲಿ ವಾಸುರವರು ಮನೆ ಮಾತಾಗಿ ಹೋದರು. ನಂತರ 1989 ರ ಮಹಾನಗರ ಪಾಲಿಕೆ ಚುನಾವಣೆಯಲ್ಲಿ ಗೆದ್ದು 1990 ರಲ್ಲಿ ಮೈಸೂರು ಮಹಾನಗರ ಪಾಲಿಕೆಯ ಮಹಾಪೌರರಾಗಿ (ಮೇಯರ್) ಚುನಾಯಿಸಲ್ಪಟ್ಟರು. ಇವರು ಮಹಾಪೌರರಾಗಿ 1990-91ರಲ್ಲಿ ನಡೆದ 60ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಪಾರ ಯಶಸ್ಸು ಸಮ್ಮೇಳನದ ಕಾರ್ಯಾಧ್ಯಕ್ಷರಾಗಿ ದುಡಿದಿದ್ದು ಇವರ ಕಾರ್ಯ ದಕ್ಷತೆಗೆ ಸಾಕ್ಷಿಯಾಗಿದೆ.

ನಂತರ 1991-92ರ ಸಾಲಿನ ಮಹಾಪೌರರ ಚುನಾವಣೆಯಲ್ಲಿ, ಚುನಾಯಿತ ಪ್ರತಿನಿಧಿಗಳ ಇಚ್ಛೆಗೆ ವಿರುದ್ಧವಾಗಿ ಅಭ್ಯರ್ಥಿಯನ್ನು ಹೂಡಲು ಪಕ್ಷದ ಹೈಕಮಾಂಡ್ ನಿರ್ಧರಿಸಿದಾಗ ಅವರ ವಿರುದ್ಧ ಸಿಡಿದೆದ್ದು, ಚಿಕ್ಕತಮ್ಮಯ್ಯ ರಂತಹ ದಲಿತ ವ್ಯಕ್ತಿಯನ್ನು ಮೇಯರ್‌ಗೇರಿಸಿದ ಕೀರ್ತಿ ವಾಸುರವರಿಗೆ ಸಲ್ಲುತ್ತದೆ. ನಂತರದ ಅವಧಿಯಲ್ಲಿ ಲಿಂಗಾಯಿತ ಕೋಮಿಗೆ ಮೇಯರ್ ಪದವಿಯನ್ನು ದಕ್ಕುವಂತೆ ಮಾಡಿ ಜಾತ್ಯಾತೀತ ಮನೋಭಾವ ಪ್ರದರ್ಶಿಸಿದರು.

ಇದಾದ ನಂತರ ಇವರು ರಾಜ್ಯ ಸರಕಾರದ ಪಾಲು ದಾರಿಕೆಯಿರುವ ವಿಕ್ರಾಂತ್ ಟೈರ್ಸ್‌ನ ನಿರ್ದೇಶಕರಾಗಿ ಕರ್ನಾಟಕ ಸರಕಾರದಿಂದ ನಾಮಕರಣ. ಈ ಸಂಸ್ಥೆಯಲ್ಲೂ ದುಡಿದು ಕಾರ್ಖಾನೆಯ ಅಭಿವೃದ್ಧಿಗೆ ತಮ್ಮ ಸೇವೆ ಸಲ್ಲಿಸಿದ್ದಾರೆ. ತದ ನಂತರ ಇವರು ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕಿನಲ್ಲಿ ಅಧ್ಯಕ್ಷರಾಗಿ ದುಡಿದವರು. ಈ ಅವಧಿಯಲ್ಲಿ ಕ.ರಾ.ಕೈ.ಸ. ಬ್ಯಾಂಕ್ ನಷ್ಟದಿಂದ ಮುಚ್ಚುವ ಹಾದಿಯಲ್ಲಿ ಇದ್ದು, ಇದರ ಅಧಿಕಾರವನ್ನು ಹಿಡಿಯಲು ಜನರಿಲ್ಲದಿದ್ದಾಗ ಅದರ ಜವಾಬ್ದಾರಿಯನ್ನು ತನ್ನ



ಹೆಗಲ ಮೇಲೆ ಹಾಕಿಕೊಂಡು ದುಡಿದು ಕೋಟ್ಯಾಂತರ ರೂಪಾಯಿ ಠೇವಣಿಯನ್ನು ಬರುವಂತೆ ಮಾಡಿ ಬ್ಯಾಂಕ್‌ನ್ನು ಲಾಭದ ದಾರಿಯಲ್ಲಿ ತಂದದ್ದು ಇವರ ಇನ್ನೊಂದು ಮಹಾ ಸಾಧನೆ. ಇಂದಿಗೂ ಇಡೀ ಕರ್ನಾಟಕದಲ್ಲಿ ಕ.ರಾ. ಕೈ.ಸ. ಬ್ಯಾಂಕ್‌ನ ಉದ್ಯೋಗಿಗಳಿಗೆ ಉದ್ಯೋಗ ಖಾತರಿಯಾಗಿದ್ದು ಇವರ ಪರಿಶ್ರಮದಿಂದಲೇ ಎನ್ನಬೇಕು. ಇವರ ನೆನಪು ಕ.ರಾ.ಕೈ.ಸ. ಬ್ಯಾಂಕ್‌ನ ನೌಕರರಲ್ಲಿ ಸದಾ ನೆನೆಯುವಂತೆ ಮಾಡಿದೆ.

ಅದೇ ಅವಧಿಯಲ್ಲಿ ಇವರು ಇನ್ನು ಒಂದು ದೊಡ್ಡ ಜವಾಬ್ದಾರಿಯ ಹುದ್ದೆಯನ್ನು ಹೊತ್ತವರು. ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಲಿ ಇದರ ಅಧ್ಯಕ್ಷರಾಗಿ ತನ್ನ ಬುದ್ಧಿವಂತಿಕೆಯಿಂದ ಆಗದೇ ಇದ್ದ ಹಾಗೂ ಆಗಬೇಕಾಗಿದ್ದ ಕೆಲಸಗಳನ್ನೆಲ್ಲಾ ಪೂರೈಸಿದರು. ಇವರ ಅಧಿಕಾರವಧಿಯಲ್ಲಿ 10ವರ್ಷಗಳಿಗೂ ಹಿಂದಿನಿಂದ ನಡೆಯದಿದ್ದ ಮಹಾ ಸಮ್ಮೇಳನವನ್ನು ಯಶಸ್ವಾಗಿ ನಡೆಯಿಸಿದ ಹೆಗ್ಗಳಿಕೆ ಇವರದು. ಇವರ ಈ ರೀತಿಯ ಕಾರ್ಯವೈಖರಿಯನ್ನು ಅಂದಿನ ಕರ್ನಾಟಕದ ಮುಖ್ಯ ಮಂತ್ರಿಯವರನ್ನು ಆಲೋಚಿಸುವಂತೆ ಮಾಡಿತು. ಇದೂ ಅಲ್ಲದೆ ಇನ್ನು ಹತ್ತಾರು ಸಹಕಾರ ಸಂಘ ಸಂಸ್ಥೆಗಳಲ್ಲಿ ದುಡಿದು ತನ್ನ ಚಿಕ್ಕ ವಯಸ್ಸಿನಲ್ಲಿಯೇ ಜನರ ಅಪಾರ ವಿಶ್ವಾಸಗಳಿಸಿದ್ದಾರೆ.

ಇವರು ರಾಜಕೀಯದಲ್ಲಿದ್ದರೂ ಜನಾಂಗದಲ್ಲಿ ತುಂಬಾ ಅಭಿಮಾನ ಇಟ್ಟವರು. ಜನಾಂಗದ ದೃಷ್ಟಿಯಲ್ಲಿ ಇವರು ಮೈಸೂರಿನಲ್ಲಿ ಮತ್ತು ಬೆಂಗಳೂರಿನಲ್ಲಿ ಒಂದೊಂದು ಪಾಲಿಟೆಕ್ನಿಕ್ ಸ್ಥಾಪಿಸಿ, ವಿದ್ಯಾವಿಕಾಸ ಎಜುಕೇಷನ್ ಟ್ರಸ್ಟ್ ಎಂಬ ಹೆಸರಿನಲ್ಲಿ ಇದು ನಡೆಯುತ್ತದೆ. ಇದೂ ಅಲ್ಲದೆ ಐ.ಟಿ.ಐ. ಮತ್ತು JOC ಕೋರ್ಸಗಳನ್ನು ಸಹ ನಡೆಸುತ್ತಿದ್ದಾರೆ. ಇವರ ಈ ವಿದ್ಯಾಸಂಸ್ಥೆಯಿಂದ ರಾಜ್ಯದ ಹಾಗೂ ಹೊರರಾಜ್ಯದ ವಿದ್ಯಾರ್ಥಿಗಳು ಬಂದು ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಇದೂ ಅಲ್ಲದೆ ಇವರು ವಿದ್ಯಾವಿಕಾಸ ಇನ್‌ಸ್ಟಿಟ್ಯೂಟ್ ಆಫ್ ಇಂಜಿನಿಯರಿಂಗ್ ಟೆಕ್ನಾಲಜಿ ಎಂಬ ಹೆಸರಿನಲ್ಲಿ ಇಂಜಿನಿಯರಿಂಗ್ ಕಾಲೇಜನ್ನು ಮೈಸೂರಿನಲ್ಲಿ ಸ್ಥಾಪಿಸಿದ್ದಾರೆ.

ಈ ರೀತಿಯ ಸರಳ, ನೇರ ನುಡಿಯ ಹಟವಾದಿ, ಜನಾಂಗದ ಅಭಿಮಾನಿ, ಬಡವರ ಬಂಧು, ಕಷ್ಟ ಕಾರ್ಪಣ್ಯಕ್ಕೆ ಸ್ಪಂದಿಸುವ ನಮ್ಮ ಜನಾಂಗದ ಈ ಮೇರು ವ್ಯಕ್ತಿಗೆ ಜನಾಂಗದ ಪರವಾಗಿ ಕೊಡಗು ಸಂಗಾತಿ ಹೆಚ್ಚಿನ ಯಶಸ್ಸನ್ನು ಹಾರೈಸುತ್ತದೆ.

ತಡಿಯಪ್ಪನ ಕುಮಾರಜಯ
(ಕುಮಾರ್) ಮೈಸೂರು

---





## ಮಲೆನಾಡಿನ ಪ್ರಥಮ ಸ್ವಾತಂತ್ರ್ಯ ಹೋರಾಟ : ಅಮರ ಕ್ರಾಂತಿ ಉತ್ಸವ

ಬ್ರಿಟಿಷರನ್ನು ಭಾರತದಿಂದ ಹೊಡೆದೋಡಿಸಲು 1857 ರಲ್ಲಿ ನಡೆದ 'ಸಿಪಾಯಿ ದಂಗೆ' ಯೇ ಮೊದಲ ಸ್ವಾತಂತ್ರ್ಯ ಹೋರಾಟ ಎಂದು ರಾಷ್ಟ್ರೀಯ ಚಾರಿತ್ರಿಯ ದಾಖಲೆ ಪಡೆದಿದೆ.

ಆದರೆ ಇದಕ್ಕೂ ಮೊದಲು 1837 ರಲ್ಲಿ ಕರ್ನಾಟಕದ ಮಲೆನಾಡು ಪ್ರದೇಶವಾದ ಕೊಡಗಿನಿಂದ ಮೊದಲಗೊಂಡು ದ.ಕ.ಜಿಲ್ಲೆಯ ಸುಳ್ಯ, ಬೆಳ್ಳಾರೆ, ಪುತ್ತೂರು ಮುಂತಾದ ಕಡೆ ದೇಶೀಯ ರೈತರ ಹೋರಾಟ ನಡೆದ ಐತಿಹಾಸಿಕ ದಾಖಲೆಯೂ ಇದೆ.

ಮಂಗಳೂರಿನತನಕ ಸಾಗಿದ ರೈತರ ದಂಡು, ಅಲ್ಲಿ ಬ್ರಿಟಿಷರ ಧ್ವಜ ಕಿತ್ತೊಗೆದು ಸ್ವಾತಂತ್ರ್ಯ ಧ್ವಜ ಹಾರಿಸಿ ಹನ್ನೊಂದು ದಿನಗಳ ಕಾಲ ಸ್ವಾತಂತ್ರ್ಯ ಸುಖ ಅನುಭವಿಸಿದ ದಂಡಿನ ನಾಯಕರು ವೀರೋಚಿತ ಸಾವನ್ನಪ್ಪಿದ ಈ ಹೋರಾಟ ಗಾಥೆಯ ಸ್ಥೂಲ ಪರಿಚಯ ಹೀಗಿದೆ.

1834 ಏಪ್ರಿಲ್ 10 ರಂದು ಕೊಡಗಿನ ವೀರರಾಜೇಂದ್ರನನ್ನು ಪದಚ್ಯುತಗೊಳಿಸಿದ ಬ್ರಿಟಿಷ್ ಕಂಪನಿ ಸರ್ಕಾರ ಕೊಡಗಿನ ಅರಸರ ಆಳ್ವಿಕೆಯ ಪ್ರಾಂತ್ಯವನ್ನು ವಿಭಜಿಸಿ 1834 ಅಕ್ಟೋಬರ್‌ನಲ್ಲಿ ಅಮರಸುಳ್ಯ, ಬೆಳ್ಳಾರೆ, ಪಂಜ, ಪುತ್ತೂರು ಭಾಗಗಳನ್ನು ಹಾಗೂ ಇನ್ನು ಕೆಲವು ಪೇಟೆ ಪ್ರದೇಶಗಳನ್ನು ಆಗಿನ ಮದ್ರಾಸು ಪ್ರೆಸಿಡೆನ್ಸಿಯ 'ಕೆನರಾ' ವಿಭಾಗಕ್ಕೆ ಸೇರಿಸಿತು.

ಸುಳ್ಯ ಪರಿಸರ 'ಕೆನರಾ' ಆಳ್ವಿಕೆಗೆ ಒಳಪಟ್ಟ ಮೇಲೆ ಕಂಪನಿ ಸರ್ಕಾರ ಈ ಭಾಗದ ರೈತರ ಮೇಲೆ ಹೊಸ ರೀತಿಯ ತೆರಿಗೆ ವಿಧಿಸಿತು.

ಈ ಹಿಂದೆ ರೈತರು ಧ್ಯಾನ್ಯ ರೂಪದಲ್ಲಿಯೇ ತೆರಿಗೆ ನೀಡುತ್ತಿದ್ದರು. ಇದಕ್ಕೆ ಬದಲಾಗಿ ಉತ್ಪತ್ತಿಯನ್ನು ಮಾರಿ ಹಣದ ರೂಪದಲ್ಲಿ ತೆರಿಗೆ ನೀಡಬೇಕೆನ್ನುವ ಹೊಸ ವಿಧಾನದಿಂದ ರೈತರಿಗೆ ನಷ್ಟವಾಗಿ ವ್ಯಾಪಾರಿಗಳಿಗೆ ಲಾಭ ಬರುವ ಅಂಶ ಗ್ರಾಮೀಣ ಪ್ರದೇಶದ ಜನರಿಗೆ ಮನದಟ್ಟಾಯಿತು.

ಈ ಹೊಸ ನಿಯಮವನ್ನು ವಿರೋಧಿಸುವ ನಿರ್ಧಾರವನ್ನು ರೈತರು ಮಾಡಿದ್ದೆ ಸ್ವಾತಂತ್ರ್ಯ ದಂಗೆಗೆ ಮುಖ್ಯ ಪ್ರೇರಣೆಯಾಯಿತು.

ಇದೆ ಹೊತ್ತಿಗೆ ಕೊಡಗು ಮತ್ತು ಸುಳ್ಯ ಪರಿಸರದಲ್ಲಿ ಅವತರಿಸಿದ ಜಂಗಮ ವೇಷಧಾರಿಯೊಬ್ಬ ತಾನು 'ಸ್ವಾಮಿ ಅಪರಂಪಾರ' ಕೊಡಗಿನ ರಾಜ ಅಪ್ಪಾಜಿಯ ಪುತ್ರ 'ವೀರಪ್ಪ' ಎಂದು ಹೇಳಿಕೊಳ್ಳುತ್ತಾ ಜನ ಸಂಘಟನೆಗೆ ತೊಡಗಿದ. ಈ ಕಾರ್ಯದಿಂದ ಸರ್ಕಾರಕ್ಕೆ ಕುತ್ತು ಬರುವುದನ್ನು ಗಮನಿಸಿದ ಆಗಿನ ಬ್ರಿಟಿಷ್ ಅಧಿಕಾರಿ 'ಕಾಟನ್' ಎಂಬುವನು ಸಕಲೇಶಪುರ ಕಾಡಿನ ಮಧ್ಯದಲ್ಲಿನ ಆಶ್ರಮದಿಂದಲೇ 1835 ರಲ್ಲಿ ಜಂಗಮ ವೇಷಧಾರಿಯನ್ನು ಬಂಧಿಸಿ ಬೆಂಗಳೂರು ಜೈಲಿಗೆ ಕಳುಹಿಸಿದ.

ಇದಾದ ಎರಡು ವರ್ಷಗಳ ನಂತರ ಸುಳ್ಯ ಪ್ರದೇಶದಲ್ಲಿ 'ಕಲ್ಯಾಣಸ್ವಾಮಿ' ಎಂಬ ಇನ್ನೊಬ್ಬ ಜಂಗಮ ಸ್ವಾಮಿ ಪ್ರತ್ಯಕ್ಷನಾದ ಈತ ಕೊಡಗಿನ ರಾಜ ಅಪ್ಪಾಜಿಯ 2ನೇ ಪುತ್ರ 'ನಂಜುಂಡಪ್ಪ' ಎಂದು ಪ್ರಚಾರ ಮಾಡುತ್ತಾ, ಜನ ಸಂಘಟನೆಗೆ ತೊಡಗಿದ. ಆಗ ಸುಳ್ಯ ಸೀಮೆಯ ಕೆದಂಬಾಡಿ ರಾಮಗೌಡ, ಕೊಡಗಿನ ಗುಡ್ಡೆಮನೆ ಅಪ್ಪಯ್ಯಗೌಡ, ಕಲ್ಯಾಣಸ್ವಾಮಿಯ ಜೊತೆಗೂಡಿದರು.

ಕಲ್ಯಾಣಸ್ವಾಮಿಯ ಜನ ಬೆಂಬಲ ಒಳಗಿಂದೊಳಗೆ ಹೆಚ್ಚುತ್ತಾ ಹೋಯಿತು. ಪರಿಣಾಮವಾಗಿ ಕೊಡಗಿನಲ್ಲಿ ಗುಡ್ಡೇರ ಅಪ್ಪಯ್ಯನ ನೇತೃತ್ವದಲ್ಲಿ 1837 ರ ಮಾರ್ಚ್ 5ರಂದು ಪ್ರಥಮ ಬಂಡಾಯ ಶುರುವಾಗಬೇಕೆಂದು ನಿರ್ಧರಿಸಲಾಯಿತು.

ಹೀಗೆ ಪ್ರಾರಂಭವಾದ ಪ್ರಥಮ ಸ್ವಾತಂತ್ರ್ಯ ದಂಗೆಯ ರೈತ ವಾಹಿನಿ ಕೊಡಗಿನಿಂದ ಇಳಿದು ಸುಳ್ಯ ಸೀಮೆ ತಲುಪಿತು.

ಕೆದಂಬಾಡಿ ರಾಮಗೌಡರ ನೇತೃತ್ವಕ್ಕೆ ಚೆಟ್ಟಿಕುಡಿಯ, ಕರ್ತುಕುಡಿಯ, ಸೋಮಯ್ಯ, ನಂಜಯ್ಯ ಮುಂತಾದವರ ಬೆಂಬಲ ದೊರೆತು ಕತ್ತಿ, ದೊಣ್ಣೆ, ಈಟಿ, ಕೊತ್ತಳಿಗೆಯಿಂದ ಸುಸಜ್ಜಿತವಾದ ದಂಡು ಮುಂದೊತ್ತಿ ಮಾರ್ಚ್ 30 ರಂದು ಬೆಳ್ಳಾರೆಯಲ್ಲಿನ ಬ್ರಿಟಿಷ್ ಟ್ರೆಜರಿಯನ್ನು ಕೊಳ್ಳೆಹೊಡೆಯಿತು.

ಅದೇ ದಿನ ರಾತ್ರಿ ಬೆಳ್ಳಾರೆಯ ಘಟನೆಯ ವರದಿ ಬ್ರಿಟಿಷ್ ಕಲೆಕ್ಟರ್ 'ಲೆವಿನ್' ಗೆ ತಲುಪಿತು. ಆತ ಮರುದಿನ ಬೆಳಿಗ್ಗೆ ನೂರಅರವತ್ತೊಂದು ಸೈನಿಕರೊಂದಿಗೆ ರಾತ್ರಿ ಪುತ್ತೂರು ತಲುಪಿದ. ಮಾರನೆಯ ದಿನ ಸುಮಾರು ಸಾವಿರದ ಇನ್ನೂರು ಸಶಸ್ತ್ರ ಜನರು ತನ್ನನ್ನು ಸುತ್ತವರೆದಿದ್ದನ್ನು ಕಂಡು ನಿರುಪಾಯನಾದ 'ಲೆವಿನ್' ಏಪ್ರಿಲ್ 2 ರಂದು ಮಂಗಳೂರಿಗೆ ಪಲಾಯನಗೈದ. ಕಲ್ಯಾಣಪ್ಪನ ದಂಡು ಪುತ್ತೂರು ಖಜಾನೆಯನು ವಶಪಡಿಸಿಕೊಂಡು, ಅಲ್ಲಿನ ತರಣಿಕ ದೇವಪ್ಪಯ್ಯನನ್ನು ಸೆರೆ ಹಿಡಿಯಿತು.

ಮುಂದೆ ಹೋದಂತೆಲ್ಲ ನಾಗರೀಕರ ಸಹಕಾರ ಪಡೆದ ದಂಡು ಅಲ್ಲಲ್ಲಿ ಇದ್ದ ಕಂಪನಿ ಸರ್ಕಾರದ ಪ್ರತಿನಿಧಿಗಳು ಶರಣಾಗುವಂತೆ ಮಾಡಿತು. ಸಮರೋತ್ಸಾಹದಿಂದ ಮುಂದುವರೆದ ದೇಶೀಯ ಕಲಿಗಳ ಮಹಾ ಪ್ರವಾಹ ಬಂಟ್ವಾಳ ತಲುಪಿ, ಅಲ್ಲಿಂದ ಮುಂದೆ 'ಕಂಕನಾಡಿ' ಗೆ ಹರಿಯಿತು.

ಇತ್ತ ಕುಂಬಳೆ ಕಡೆಯಿಂದ ತಯಾರಾದ ದಂಡು ಉಳ್ಳಾಲದ ಮೂಲಕ ಮಂಗಳೂರು ತಲುಪಿತು. ಸ್ವಾತಂತ್ರ್ಯ ಯೋಧರ ಈ ದಂಡಿಗೆ ಮಂಗಳೂರು ನಾಗರೀಕರು ಭವ್ಯ ಸ್ವಾಗತ ನೀಡಿದರೆ ಬ್ರಿಟಿಷರ ಕೈಕಾಲುಗಳು ನಡುಗತೊಡಗಿದವು.

ಹೀಗೆ ಎಲ್ಲಾ ಕಡೆಯಿಂದ ಹರಿದು ಬಂದ ದಂಡು 1837 ರ ಏಪ್ರಿಲ್ 5 ರಂದು ಮಂಗಳೂರಿನ ಬಾವುಟ ಗುಡ್ಡೆಯಲ್ಲಿ ಹಾರಾಡುತ್ತಿದ್ದ 'ಯೂನಿಯನ್ ಜಾಕ್' ಇಳಿಸಿ ಸ್ವಾತಂತ್ರ್ಯ ಧ್ವಜ ಹಾರಿಸುವುದರೊಂದಿಗೆ ಸ್ವಾತಂತ್ರ್ಯದ ಪ್ರಥಮ ವಿಜಯೋತ್ಸವ

ಆಚರಿಸಿದರು.

ದಂಡಿನ ವಿಜಯದಿಂದ ಕಂಗಾಲಾಗಿದ್ದ ಮಂಗಳೂರು ನಿವಾಸಿ ಬ್ರಿಟಿಷರನ್ನು ಮಾರನೆಯ ದಿನ ಹೊನ್ನಾವರದಿಂದ ಮದ್ದು ಗುಂಡುಗಳೊಂದಿಗೆ ಬಂದ60 ಸೈನಿಕರ ಸಹಾಯದಿಂದ ಹಡಗು ಹತ್ತಿಸಿ ಕಣ್ಣಾನೂರಿಗೆ ಕಳುಹಿಸಲಾಯಿತು.

ಕಲ್ಯಾಣಸ್ವಾಮಿಯ ದಂಡಿನ ಮಂಗಳೂರು ವಿಜಯದ ಸುದ್ದಿ ತಿಳಿದು ಕೊಡಗಿನ ಬ್ರಿಟಿಷ್ ಅಧಿಕಾರಿ 'ಕ್ಯಾಪ್ಟನ್ ಲೀಹಾರ್ಡಿ' ಸಿಡಿಮಿಡಿಗೊಂಡನು. ತನ್ನ ಸೇನೆಯ ಬೋಪು ದೀವಾನನನ್ನು ಕರೆದು ಮನವೊಲಿಸಿ ಕಲ್ಯಾಣಸ್ವಾಮಿಯನ್ನು ಸೆರೆ ಹಿಡಿಯುವ ತಂತ್ರ ರೂಪಿಸಿದ. ಮುಂದೆ ಎಲ್ಲಾ ನಾಟಕಗಳು ನಡೆದು ಏಪ್ರಿಲ್ 15 ರಂದು ಗುಡ್ಡೆಮನೆ ಅಪ್ಪಯ್ಯ, ಆತನ ಬೆಂಬಲಿಗರನ್ನು ಬಂಧಿಸುವುದರಲ್ಲಿ ಬೋಪು ದೀವಾನ ಯಶಸ್ವಿಯಾದ.

ರೈತರ ದಂಡಿನ ವಶದಲ್ಲಿದ ಮಂಗಳೂರನ್ನು ಕಣ್ಣಾನೂರಿನಿಂದ ಬಂದ ಬ್ರಿಟಿಷ್ ವಿಶೇಷ ಸೈನ್ಯ ಪುನಃ ತನ್ನ ವಶಕ್ಕೆ ತೆಗೆದುಕೊಳ್ಳುವುದರೊಂದಿಗೆ 11 ದಿನ'ಳ ದೇಶೀಯ ದಂಡಿನ ಆಡಳಿತ ಕೊನೆ ಗೊಂಡಿತು. ಸೆರೆ ಸಿಕ್ಕ ವೀರ ರೈತರನ್ನು ಗಲ್ಲಿಗೇರಿಸಲಾಯಿತು.

ನಂತರ ಸ್ವಾತಂತ್ರ್ಯ ದಂಗೆಯ ರೂವಾರಿ ಕಲ್ಯಾಣಸ್ವಾಮಿಯ ಬಂಧನಕ್ಕೆ ಮುಂದಾದ ಬ್ರಿಟಿಷ್ ಸರ್ಕಾರ ಆತನನ್ನು ಹಿಡಿಯಲು ಸಹಕರಿಸಿದವರಿಗೆ 10,000 ರೂ. ಬಹುಮಾನ ನೀಡುವುದಾಗಿ ಘೋಷಿಸಿತು.

1837ರ ಮೇ ತಿಂಗಳಲ್ಲಿ ಸಕಲೇಶಪುರದ ಬಿಸಲೇ ಅರಣ್ಯದಲ್ಲಿ ಅಡಗಿಕೊಂಡಿದ್ದ ಕಲ್ಯಾಣಸ್ವಾಮಿಯನ್ನು ಆತನ ಸಂಬಂಧಿಕರ ಕುತಂತ್ರದಿಂದಲೇ ಬಂಧಿಸಲಾಯಿತು. ಅಕ್ಟೋಬರ್ 31 ರಂದು ಕಲ್ಯಾಣಸ್ವಾಮಿ, ಕೆದಂಬಾಡಿ ರಾಮಗೌಡ, ಗುಡ್ಡೆರ ಅಪ್ಪಯ್ಯ ಮುಂತಾದವರನ್ನು ಮಡಿಕೇರಿಯಲ್ಲಿ ಗಲ್ಲಿಗೇರಿಸುವ ಮೂಲಕ ದಂಗೆಯನ್ನು ಪೂರ್ಣವಾಗಿ ಹತ್ತಿಕ್ಕಲಾಯಿತು. ಇದರೊಂದಿಗೆ ಪ್ರಥಮ ಸ್ವಾತಂತ್ರ್ಯ ಹೋರಾಟದ ಜ್ಯೋತಿಯು ಸಂಪೂರ್ಣವಾಗಿ ನಂದಿಹೋಯಿತು.

ಅವಧಿ ಹಾಗೂ ವ್ಯಾಪ್ತಿಯ ದೃಷ್ಟಿಯಲ್ಲಿ ಇದು ಚಿಕ್ಕ ಹೋರಾಟವೆನಿಸಿದರೂ ಬ್ರಿಟಿಷರ ವಿರುದ್ಧದ ಪ್ರಥಮ ಸ್ವಾತಂತ್ರ್ಯ ಹೋರಾಟ ಎಂದು ಧಾರಾಳವಾಗಿ ಗುರುತಿಸಬಹುದು.

ಇದನ್ನು ಪ್ರಮಾಣೀಕರಿಸುವ ಐತಿಹಾಸಿಕ ದಾಖಲೆಗಳು 'ಲೆವಿನ್ ರಿಪೋರ್ಟ್, 'ಗೆಜೆಟಿಯರ್ ಆಫ್ ಕೂರ್ಗ್' (ರೇ/ಜ. ರಿಕ್ಟರ್), 'ಕೊಡಗಿನ ಇತಿಹಾಸ'- (ಡಿ.ಎನ್. ಕೃಷ್ಣಯ್ಯ) 'ಲಿಂಗರಾಜನ ಹುಕುಮ್ ನಾಮೆ' (ಡಾ. ಪುರುಷೋತ್ತಮ ಬಿಳಿಮಲೆ) ಮುಂತಾದವರ ಇನ್ನೂ ಅನೇಕ ಗ್ರಂಥಗಳು ಲಭ್ಯವಿವೆ.

ಇಷ್ಟಿದ್ದರೂ ಇಡೀ ಕರ್ನಾಟಕಕ್ಕೇ ಸ್ವಾತಂತ್ರ್ಯ ಹೋರಾಟದಲ್ಲಿ ಅಗ್ರಸ್ಥಾನ ಕಲ್ಪಿಸಿಕೊಡುವ ಈ ಮಹತ್ವದ ಘಟನೆ ನಿರೀಕ್ಷಿತ ಸ್ಥಾನ ಇನ್ನೂ ಪಡೆಯದೆ ಇರುವುದು ವಿಷಾದನೀಯ.

ಈ ಮಹತ್ವದ ಸಂಗತಿಯನ್ನು ಈಗಿನ ಪೀಳಿಗೆಗೆ ತಿಳಿಸಬಯಸುವ ಹಾಗೂ ಐತಿಹಾಸಿಕ ದಾಖಲೆಯನ್ನು ವರ್ತಮಾನಕ್ಕೆ ಸಾದರಪಡಿಸುವ ಉದ್ದೇಶದಿಂದ ಸುಳ್ಯದಲ್ಲಿ ಏಪ್ರಿಲ್ ಪ್ರಥಮ ವಾರದಲ್ಲಿ 'ಅಮರ ಕ್ರಾಂತಿ ಜಾಥಾ ನಡೆಯಿತು.

ಅಂದು ಸ್ವಾತಂತ್ರ್ಯ ದಂಡು ಸಾಗಿದ ಕಡೆಯಲ್ಲೆಲ್ಲಾ ಕಾಲ್ನಡಿಗೆ ಜಾಥಾ ಸಾಗುತ್ತಾ ಏಪ್ರಿಲ್ 5 ರಂದು ಮಂಗಳೂರು ಬಾವುಟ ಗುಡ್ಡೆಯಲ್ಲಿ ಆ ನೆನಪಿನ ಸ್ವಾತಂತ್ರ್ಯ ಬಾವುಟವನ್ನು ಹಾರಿಸಲಾಯಿತು.

ಸ್ವಾತಂತ್ರ್ಯ ಉತ್ಸವದ ಸುವರ್ಣ ಹಬ್ಬ ಆಚರಿಸುತ್ತಿರುವ ಈ ವರ್ಷದಲ್ಲಿ 'ಅಮರಕ್ರಾಂತಿ ಉತ್ಸವ' ಅವಿಸ್ಮರಣೀಯ ಸಂಗತಿಯಾಗಲಿದೆ.

*-ಡಾ. ಎಚ್. ಎಂ. ಕುಮಾರಸ್ವಾಮಿ*



## ಕೊಡಗು

ಎತ್ತ ನೋಡಿದರತ್ತ ಬೆಟ್ಟ
ಹಸುರಿನ ಸೀಮೆಯ ಘಟ್ಟ
ಸುಂದರ ಸಿರಿಮೆಯ ಮೈ ಮಾಟ
ಪಚ್ಚೆ ಪೈರುಗಳ ಕೂಟ!

ಕಾಫಿ ಗಿಡವೇ ಕಲ್ಪವೃಕ್ಷ
ಕಾವೇರಿ ನದಿಯೆ ಕಾಮಧೇನು
ಬ್ರಹ್ಮಗಿರಿಯೆ ಶ್ರೀಶೈಲ
ಮಧುರ ಮಧುವೆ ಅಮೃತ!

ಸುಮಧುರ ಸುಂದರ ನಾಡು
ದಕ್ಷಿಣ ಕಾಶಿಯ ಬೀಡು
ಗಿಳಿ ಕೋಗಿಲೆಗಳ ಹಾಡು
ಇದರ ಸೌಂದರ್ಯವ ನೀ ನೋಡು

ಪಾಲ್ಗುಣದಿ ವೈಶಾಖದೊರೆಗೆ ನಗುವಳು
ಕಾರ್ತಿಕದಿಂದ ಮಾಘದೊರೆಗೆ ನಡುಗುವಳು
ಜ್ಯೇಷ್ಮದಿಂದ ಭಾದ್ರಪದ ದೊರೆಗೆ ಅಳುವಳು
ಪ್ರಕೃತಿದತ್ತ ವರವನು ಪಡೆದಿಹಳು

ಭಾರತಾಂಬೆಯ ಒಡಲಲಿರುವಳು
ಕನ್ನಡಾಂಬೆಯ ಮಡಿಲ ಮಗಳು
ಕಾವೇರಿಯಾಗಿ ನಿಂದಿಹಳು
ವೀರಾಧಿ ವೀರರಿಗೆ ಜನ್ಮವೆತ್ತಿಹಳು

☆ ತೆಕ್ಕಡ. ಬಿ. ಕುಮಾರ, ಮುತ್ತಾರ್ಮುಡಿ

---

# ಶುಭಾಶಯಗಳು

**ಶ್ರೀ ಬಾರಿಯಂಡ ರಾಮಪ್ಪ ಜೋಯಪ್ಪ**
**ಶ್ರೀಮತಿ ಬಾರಿಯಂಡ ಭಾರತಿ ಜೋಯಪ್ಪ**
**ಮತ್ತು ದಿವ್ಯ ಹಾಗೂ ದೀಪಕ್**

ಮದೆ ಗ್ರಾಮ ಮತ್ತು ಅಂಚೆ
ಮಡಿಕೇರಿ, ಕೊಡಗು

---

## ಪುಸ್ತಕ ಪರಿಚಯ

ಕೊಡಗು ಸಂಗಾತಿ ಪತ್ರಿಕೆಯ ಅರೆಭಾಷೆಯ ಲೇಖಕರಾದ ಶ್ರೀ ಬಾರಿಯಂಡ ಜೋಯಪ್ಪನವರ "ಯಾರ ಬೇಟೆ ಮತ್ತು ಇತರ ಪ್ರಸಂಗಗಳು" ಎಂಬ ಚೊಚ್ಚಲ ಕೃತಿಯು ಪ್ರಕಟಗೊಂಡಿದೆ. ಮಲೆನಾಡಿನ ಬೇಟೆಗಾರರ ಮನ ಸೂರೆಗೊಳ್ಳುವ ಉತ್ತಮ ನೈಜ ಚಿತ್ರಣವಾಗಿದ್ದು, ಸರ್ವರು ಓದಲು ಅರ್ಹವಾದ ಕೃತಿಯಾಗಿದೆ

*ಸಂಪಾದಕಿ*



# "ಕಾವೇರಿಯ ಮಡಿಲಲ್ಲಿ"

ನಾನೊಮ್ಮೆ ಸಾಗಿದೆ ತಲಕಾವೇರಿಯತ್ತ
ಕಂಗಳಾಡಿಸಿದೆ ಸೌಂದರ್ಯದ ಬೆಟ್ಟಗಳತ್ತ
ನೂರಾರು ಮೆಟ್ಟಿಲ ಹತ್ತಿ ನಿಂತೆನಾ ಬೆಟ್ಟದ ತುದಿಯಲಿ
ಬೆಟ್ಟಗಳು ನಿಂತಿಹವು ಬಿಳಿ ಮೋಡಗಳ ಸೆರಗಿನಲಿ
ಶಿಲೆಯೊಳಗೆ ಕಲೆಯಾಗಿ ನಿಂತಿಹಳು ತಾಯಿ ಕಾವೇರಿ
ಭೂಮಿಯೊಳಗೆ ನೀ ನೆಲೆಸಿರುವೆ ನಮ್ಮೆಲ್ಲರ ಆಶ್ರಯದಾತೆ||

ಭಕ್ತರ ಮನವನ್ನು ತಣಿಸುವಳು ಒಡಲೆಂಬ ಕೊಳದಲ್ಲಿ
ಶ್ರದ್ಧೆಯಿಂದ ಪೂಜೆಗೈಯುವರು ತುಸು ತಾಸುಗಳ ಮುಂದೂಡಿ
ಕೊನೆಗೆ ಕಾಣುವರು ಆನಂದವೆಂಬ ಅರಮನೆಯ
ಆ ಅರಮನೆಯ ಗೋಪುರವೇ ಕಾವೇರಿ ತಾಯಿಯ ಆಶ್ರಯ||

ಝುಳ ಝುಳನೆ ಹರಿಯುತಿಹಳು ಪ್ರಕೃತಿಯ ಸೆರಗಲ್ಲಿ
ಭೋರ್ಗರೆದು ಹರಿಯುತಿಹಳು ಭಾಗಮಂಡಲದ ಮಡಿಲಲ್ಲಿ
ಎಲ್ಲೆಡೆಯಿಂದಿಲ್ಲಿಗೆ ಧಾವಿಸುವರು ಕಾವೇರಿ ದರುಶನಕ್ಕೆ
ಅಭಯವ ನೀಡುವಳು ದರುಶನವ ಕೋರಿ ಬಂದ ಭಕ್ತರಿಗೆ||

ಕಾವೇ[illegible]ಯಿಯ ಬುನಾದಿಯಾಗಿ ನಿಂತಿಹುದು ದೇವಾಲಯವೊಂದು
ಆ [illegible]ುವೇ ಭಾಗಮಂಡಲದಲ್ಲಿನ ಭಗಂಡೇಶ್ವರ ದೇವಾಲಯ
[illegible] ಕಾವೇರಿ, ಕನ್ನಿಕೆ ಸುಜ್ಯೋತಿಗಳ ತ್ರಿವೇಣಿ ಸಂಗಮ
[illegible]ಂದ ಆಗುವುದಿಲ್ಲಿ ಪಾಪಗಳ ಪರಿಹಾರ||

[illegible] ಜನತೆಯ ಅನ್ನದಾತೆಯಾಗಿ ನಿಂತಿಹಳು
[illegible] ತಣಿಸಿಹಳು ಕೃಷ್ಣರಾಜ ಸಾಗರದೊಳು
[illegible]ಹಳು ಪ್ರಕೃತಿ ಸಿರಿಯ ಸೊಬಗನ್ನು
[illegible]ಾಯಿ ಸೌಂದರ್ಯದ ಸೊಬಗನ್ನು||

ಅಂಬ್ರಾಟಿ ಭಗವತಿ ಪ್ರಸಾದ್ ತಮ್ಮಯ್ಯ
ಬಿ.ಎ., ಬಿ.ಎಡ್., ಎಂ.ಎ. (ಹಿಂದಿ)
ಕೋರಂಗಾಲ ಗ್ರಾಮ, ಭಾಗಮಂಡಲ

ಳು

ಉಪನ್ಯಾಸಕರು

541904



## ಕೊಡಗೂರು

ಬನ್ನಿರಿ ನೋಡಿರಿ ಕೊಡಗೂರು
ಕನ್ನಡ ನಾಡಿನ ಚೆಲುವೂರು
ಸ್ವಾಗತ ನೀಡಿದೆ ಕೊಡಗೂರು
ಸುಸ್ವಾಗತ ನೀಡಿದೆ ಕೊಡಗೂರು

ಪಶ್ಚಿಮ ಘಟ್ಟದ ಸಾಲಲಿ ಮೆರೆದಿದೆ
ಚೆಲುವಿಗೆ ಹೆಸರಾದ ಕೊಡಗೂರು
ಪ್ರಕೃತಿ ಚೆಲುವೆಲ್ಲಾ ಚೆಲ್ಲಾಟವಾಡುವ
ಭೂರಮೆ ರಮಿಸುವ ಕೊಡಗೂರು

ಬ್ರಹ್ಮಗಿರಿಯಿಂದ ಪುಷ್ಪಗಿರಿ ಪರಿ
ಯಂತರ ಹಬ್ಬಿದ ಕೊಡಗೂರು
ಗಿರಿಗಳ ರಾಶಿಯ ಗರಿಯಂತೆ ಚಾಚಿದೆ
ಹಸುರಾಗಿ ಹೊಮ್ಮುವ ಕೊಡಗೂರು

ಕೊಡಗರು, ಗೌಡರು, ಪರಭಾಷೆಯರು
ನೆಲೆಯನು ಕಂಡಿಹ ಕೊಡಗೂರು
ನಾನಾ ಮತ ಜಾತಿ ಒಂದಾಗಿ ಬಾಳುವ
ಶಾಂತಿಯ ಧಾಮವು ಕೊಡಗೂರು

ಹಿಂದಿನ ಕಾಲದಿ ವೀರರು ಆಳಿದ
ಶೂರರ ನಾಡಿದು ಕೊಡಗೂರು
ಧೀರರು, ವೀರರು ಜನರೆಲ್ಲ ಬಾಳಿದ
ಸಾಹಸ ತೋರಿದ ಕೊಡಗೂರು

ಸಿರಿಯಧಿ ದೇವತೆ ನಲಿಯುವ ನಾಡಿದು
ಸೌಭಾಗ್ಯದ ನಿಧಿ ಕೊಡಗೂರು
ಸೃಷ್ಟಿಯ ಚೆಲುವೆಲ್ಲ ಕಲೆತಿಲ್ಲಿ ಹರಿವುದು
ಋಷಿಗಳು ಮೆಚ್ಚಿದ ಕೊಡಗೂರು

ಕವೇರ ಅಗಸ್ತ್ಯರು ತಪಗೆಯ್ದರಂತಿಲ್ಲಿ
ಇದು ಭೂಸ್ವರ್ಗವು ಕೊಡಗೂರು
ಕಾವೇರಿ ಮಾತೆಯು ಜನಿಸಿದ ನಾಡಿದು
ಪಾವನ ಭೂಮಿಯು ಕೊಡಗೂರು

ಬೀಸುವ ತೆಂಕಣ ಗಾಳಿಗೆ ಇಲ್ಲಿಯ
ಗಿಡಮರ ನಲಿದಿದೆ ಕೊಡಗೂರು
ಇಂಪಿನ ಹಾಡಿಗೆ ತಾಳದ ನರ್ತನ
ಪಕ್ಷಿಗಳು ಪಾಡುವ ಕೊಡಗೂರು

ಗಗನದಿ ಓಡುವ ಮೋಡಗಳೆಲ್ಲವು
ತಂಗುವ ಊರಿದು ಕೊಡಗೂರು
ಗಂಗಮ್ಮ ಒಲಿದಿಲ್ಲಿ ಹರಿದಾಳೆ ನಾಡೆಲ್ಲ
ಒರತೆಗಳ್ ಚಿಮ್ಮುವ ಕೊಡಗೂರು

ಕೊಡಗಿನ ತಾಯಿಗೆ ನೊರೆನಗೆ ಮಲ್ಲಿಗೆ
ನದಿಗಳು ಮುಡಿಸುವ ಕೊಡಗೂರು
ಪರ್ವತರಾಯನು ಗಗನಾದೇವಿಗೆ
ಮುತ್ತನ್ನಿಕ್ಕುವ ಕೊಡಗೂರು

ಕೊಡಗಿನ ನಾಡೆಲ್ಲಾ ವನಸಿರಿ ಸಿಂಗಾರ
ರವಿ ಮರುಳಾಗಿಹ ಕೊಡಗೂರು
ಚಂದದ ಹೆಣ್ಣಿಗೆ ಪ್ರೇಮಾಲಿಂಗನ
ಸ್ನೇಹದ ಚುಂಬದ ಕೊಡಗೂರು

ಹುಣ್ಣಿಮೆಯ ದಿನ ಹಾಲಿನ ಬೆಳಕಿಗೆ
ಊರೆಲ್ಲ ನಲಿಯುವ ಕೊಡಗೂರು
ಕೃಷ್ಣ ಪಕ್ಷದ ಕಗ್ಗತ್ತಲೆಯಲಿ
ಕತ್ತಲೆ ಕಾರುವ ಕೊಡಗೂರು

ವಸಂತಕಾಲದಿ ನಾಡೆಲ್ಲಾ ಸಿಂಗಾರ
ಸುಂದರ ನಾಡಿದು ಕೊಡಗೂರು.
ಹಸುರಾದ ಸೀರೆಗೆ ಬೆಳ್ಳಿಯ ಕುಪ್ಪಸ
ಈ ಭೂಮಾತೆಯೆ ಕೊಡಗೂರು

ಅಂದದ ಹೆಣ್ಣಿಗೆ ಚಂದದ ತೊಡಿಗೆಯು
ಚೆಲುವಿನ ಧಾಮವು ಕೊಡಗೂರು
ಚೆಲುವೆಲ್ಲ ಮೈ ತಳೆದು ನಲಿಯುವ ನಾಡಲ್ಲಿ
ಜೀವನ ಪಾವನ ಕೊಡಗೂರು

ಕೊಡಗಿನ ನಾಡಿಗೆ ತಲೆಮಣಿಯಾಗಿ
ಮೆರೆದಿದೆ ಮಡಿಕೇರಿ ಕೊಡಗೂರು
ಮಡಿಕೇರಿಯಲ್ಲಿಹ ರಾಜಾ ಸೀಟಿಗೆ
ಸಗ್ಗವೆ ಇಳಿದಿದೆ ಕೊಡಗೂರು

ಭತ್ತ, ಯಾಲಕ್ಕಿ, ಕಿತ್ತಳೆ ಬೆಳೆಯುವ
ಕಾಫಿಗೆ ಹೆಸರಾದ ಕೊಡಗೂರು
ಕೊಡಗಿನ ನಾಡಲ್ಲಿ ಬನವೆಲ್ಲಾ ಸಿಂಗಾರ
ಜೇನನು ನೀಡುವ ಕೊಡಗೂರು.

ಭಾರತ ದೇಶಕ್ಕೆ ಯೋಧರ ನೀಡಿದ
ವೀರರ ನಾಡಿದು ಕೊಡಗೂರು
ಪ್ರಕೃತಿ ಸುಂದರ ಕೊಡಗೂ
ತಂಪಿನ ಸೊಂಪಿನ ಕೊ

ಇದು ಶಾಂತಿಧಾಮವ
ಬನ್ನಿರಿ ನೋಡಿರಿ
ಕನ್ನಡ ನಾ
ಸಾ

# ಅರೆಭಾಷಿಕ ವಿಭಾಗ

## ಅರೆಭಾಷೆಗೆ ಆಪತ್ತ್

ಸಂತೆದಿನ ಬಸ್‌ಲಿ ಸೀಟ್ ಹಿಡ್ಯದರ ಮುಂದೆ ಚಕ್ರವ್ಯೂಹಕ್ಕೆ ನುಗ್ಗಿ ಜಯಿಸಿಬಾದು ಏನೇನೂ ಸಾಧನೆ ಅಲ್ಲ. ಹಂಗೆ ಮೊನ್ನೆ ಎಲ್ಲವೂ ಬಸ್ಸ್‌ನ ಬಾಗ್‌ಲ್‌ಲಿ ಹತ್ತ್‌ಕನ ನಾನ್ ಡ್ರೈವರ್ ಹತ್ತುವಲ್ಲಿಗಾಗಿ ನಿಗ್‌ರಿ ಹತ್ತಿಬುಟ್ಟೆ. ಒಳಗಿದ್ದ ನಾಲ್ಕೈದ್ ಇಸ್ಕೂಲ್ ಮಕ್ಕ ಅವರ ಹಕ್ಕಲೆ ಇದ್ದ ಪುಸ್ತಕಗಳ್ನೆಲ್ಲ ಇಸ್ಪೇಟ್ ಎಲೆ ಹಾಕಿದಂಗೆ ಸೀಟ್‌ಲೆಲ್ಲ ಹಾಕಿ ಮಡಗಿದ್ದೊ. ಒಂದು ಸೀಟ್‌ಲಿ "ಕೊಡಗು ಸಂಗಾತಿ" ಪತ್ರಿಕೆ ಇತ್ತ್. ಮೆಲ್ಲತೆಗ್ದ್ ಹಾಳೆ ಮಗ್ಚಿದೆ. "ಅರೆ ಭಾಷಿಕ ವಿಭಾಗಂತ" ಕಂಡೆ. ಅರೆ! ಇದೆಂತದಪ್ಪ ಅರೆ ಭಾಷೆ! ಭಾಷೆಲಿ ಅರ್ಧ-ಇಡಿ ಅಂತ ಬೇರೆ ಬೇರೆ ಉಟ್ಟಾ? ಇದ್ ಅರೆಭಾಷೆ ಆದರೆ ಅದರ ಬಾಕಿ ಅರ್ಧ ಏನಾತ್‌ಂತ್ ಆಲೋಚನೆ ಮಾಡ್ದೆ. ಎರಡ್‌ಗೆರೆ ಓದಿಕಾಕನ ಅದ್ ನಾನ್ ಸಣ್ಣವ ಆಗಿರ್‌ಕನ ನಮ್ಮ ನೆರೆಕರೆ ಜನರೊಟ್ಟಿಗೆ ಮಾತಾಡ್ತಿದ್ದ 'ಅರೆಗನ್ನಡ' ಭಾಷೆ !

ಹಾ! ಎಂತಾ ಇಂಪಾದ ಭಾಷೆ. ಆಡುಭಾಷೆಗಳ ಪೈಕಿ ಈ ಅರೆಗನ್ನಡ ದಷ್ಟ್ ನಂಗೆ ಕುಶಿ ಕೊಡುವ ಭಾಷೆ ಬೇರೆ ಇಲ್ಲೆ. ಈಗಳೂ ನಮ್ಮೂರವರ ಎಲ್ಲಾರ್ ಕಂಡರೆ ಈ ಅರೆಗನ್ನಡ ಸುರುಮಾಡ್ತೆ. ತಪ್ಪೋ ರೈಟೊ, ಅದೆಲ್ಲ ನೋಡಟ ಇಲ್ಲೆ. ಒಟ್ಟಾರೆ ಆ ಭಾಷೆತೇಳ್ರೆ ನಂಗೆ ಅವ್ವನ ಎದೆ ಹಾಲ್ ಕುಡ್ದಂಗೆ. ಆದರೆ ಸುಮಾರ್ ಅರವತ್ತ್ ವರ್ಷದ ಹಿಂದೆ ಬೆಳ್ದದೆಲ್ಲ ಗೌಡ ಜನಾಂಗದವರ ನಡುಲಿ.

ಗೌಡರ್ ಈ ಭಾಷೆನ ಮೆಚ್ಚಿಕಂಡ್ರೆ ಅದ್ ಸ್ವಜಾತಿ ಅಭಿಮಾನಾತ ಹೇಳಕ್. ಆದರೆ ಮಾತೃಭಾಷೆ ಅದಲ್ಲದ ನಾನ್ ಆ ಭಾಷೆನ ಮೆಚ್ಚಿರೆ, ಅದರ್ಲಿ ಸ್ವಲ್ಪ ಅರ್ಥ ಇರೊಕಲೆ?

ಹೋಗುತ್ತೇನೆ =ಹೋನೆ, ಬರುತ್ತೇನೆ=ಬನ್ನೆ, ಹೋಗುವಾಗ= ಹೋಕನ, ಬರುವಾಗ= ಬಾಕನ, ಅಂತೆ=ಗಡ, ಬಲ್ಲೆಯಾ=ಬಲಾ, ಬಲ್ಲಿರಾ=ಬಲರಿಯಾ- ಇವೆಲ್ಲಾ ಸುಂದರ ಪ್ರಯೋಗಗ. ಈಗಿನ ಯುವ ಪೀಳಿಗೆಗೆ ಈ ತರದ ಪ್ರಯೋಗ ಗೊತ್ತೇ ಇಲ್ಲೆಯೋಂತ ಸಂಶಯ ಬಂದದೆ. ಉದಾಹರಣೆಗೆ ನಾ ನಾಡ್ದ್ ಬನ್ನೆ ಬಲಾ- ನಾನು ನಾಡಿದ್ದು ಬರುತ್ತೇನೆ ಆಯಿತಾ =ಏಕವಚನ

ನಾ ನಾಡ್ದ್ ಬನ್ನೆ ಬಲರಿಯಾ = ನಾನು ನಾಡಿದ್ದು ಬರುತ್ತೇನೆ ಆಯಿತಾ? ಬಹುವಚನ ಪ್ರಯೋಗ.

ಒಟ್ಟಾರೆ ಈ ಭಾಷೆಲಿ ಕರ್ಕಶ ಅಥವಾ ಒರಟ್‌ತನ ಇಲ್ಲೇ ಇಲ್ಲೆ. ಒಂದು ವಿಶೇಷ ರೀತಿಲಿ ಆತ್ಮೀಯತೆ ಬೆಳಸುವ ಭಾಷೆ ಈ ಅರೆಗನ್ನಡ (ಅರೆಭಾಷೆ)

ಕೆಲವು ಜನ ಇದರ ಗೌಡ ಭಾಷೆ, ಗೌಡಗನ್ನಡ ತ್ತೆಲ್ಲ ಹೇಳುವೆ. ಅದ್ ಸರಿಯಾಕಿಲೆತ ನನ್ನ ಅಭಿಪ್ರಾಯ ಎಷ್ಟ್ ತರದ ಗೌಡರ್ ವಳೊ. ಅವು ಎಲ್ಲವೂ ಈ ಭಾಷೆ ಆಡ್‌ದುಲೆಲೆ? ಇದೆಲ್ಲ ಭಾಷಾ ವಿದ್ವಾಂಸರ್ ತೀರ್ಮಾನ ಮಾಡಿಕಣಲಿ. ಆದರೆ ಈ ಭಾಷೆಗೆ ಬಂದ ಗತಿನ ನಾಲ್ಕ್ ಗೆರೆ ಬರ್ದರೆ ಯಾರೂ ಸಿಟ್ಟ್ ಮಾಡಿಕೆ ಬೊತ್ತ್.

ಸುಮಾರ್ ವರ್ಷದ ಹಿಂದೆ 'ಗೌಡ ದನಿ' ತೇಳಿ ಒಂದು ಸಂಚಿಕೆ ಹೊರಡಿಸಿದೊ. ಭಾರಿ ಲಾಯ್ಕ ಇತ್ತ್. ಅದೇ ತರ ವರ್ಷಕೊಂದಾರ್ ಸಂಚಿಕೆ ಹೊರಡಿಸಿದ್ದರೆ, ಇಷ್ಟೊತ್ತಿಗಾಕನ ಈ ಅರೆಗನ್ನಡ ಎಷ್ಟೋ ಮುಂದಕೆ ಬಂದಿರ್‍ದು. ಈಗ 'ಕೊಡಗು ಸಂಗಾತಿ' ಧೈರ್ಯಲಿ ಮುಂದೆ ಬಂದುಟು. ಮೂಲೆಗೆ ಅಡ್ರಿ ಹೋದ ಅರೆಭಾಷೆನ ಬೆಳ್ಸಿಕೆ ವಿದ್ಯಾವಂತರ್ ಮುಂದೆ ಬರಕು. ಹೊಸ ಭಾಷೆಯೊಂದರ ಸೃಷ್ಟಿಮಾಡಿಕೆ ನಮ್ಮಂದ ಆಕಿಲೆ. ಅದರ ಅವಶ್ಯಕತೆಯೂ ಇಲ್ಲೆ. ಮಾನವ ಜೀವಿಗಳ ವಿಕಾಸದೊಟ್ಟಿಗೆ ಬೆಳ್ದ್ ಬಂದ ಭಾಷೆನ ಅನಾಗರಿಕರ ಭಾಷೆತೇಳಿ ಮೂಲೆಗೆ ತಳ್ಳುದು ಹೆತ್ತ ತಾಯಿನ ಬಾವಿಗೆ ನೂಕಿದಂಗೆ-

ಈ ಅರೆಗನ್ನಡದ ವಿಚಾರಲಿ ಕೊಡಗಿನ ಗೌಡರಿಗೂ ಕನ್ನಡ ಜಿಲ್ಲೆಯವ್ಕೂ ಭಾರಿ ವ್ಯತ್ಯಾಸ ಉಟ್ಟು. ವ್ಯತ್ಯಾಸ ತೇಳ್ರೆ ಭಾಷೆಲಿ ವ್ಯತ್ಯಾಸ ಅಲ್ಲ. ಭಾಷಾಭಿಮಾನದ ವ್ಯತ್ಯಾಸ. ಸಂಪಾಜೆ, ಚೆಂಬು, ಪೆರಾಜೆ, ಸುಳ್ಯ, ಸುಬ್ರಹ್ಮಣ್ಯ ಈ ಕಡೆನ ಗೌಡರ್ ಯಾವ ರಾಜ ಸಭೆಲಿ ಬೇಕರೂ ಹೆಮ್ಮೆಲೇ ಮಾತಾಡಿಕಂಡವೆ. ಅವರ ತಾಯ್ನುಡಿ ಅರೆ ಭಾಷೆ ಮಾತಾಡ್ದು ಅವ್ಕೆ ಒಂದು ಗತ್ತ್. ಬೇರೆ ಬೇರೆ ಜಾತಿಯವು ಹತ್ತ್ ಜನ ಕೂಡ್‌ದಲ್ಲಿ ಅವರ ಭಾಷೆನ ಯಾವುದೇ ಅಂಜಿಕೆ ಇಲ್ಲದೆ ಮಾತಾಡ್ವೆ. ದೊಡ್ಡ ದೊಡ್ಡ ವಿದ್ಯಾವಂತರೂ, ಸರ್ಕಾರಿ ಅಧಿಕಾರಿಗ ಎಲ್ಲ ಮಕ್ಕಳೊಟ್ಟಿಗೆ ಅರೆಗನ್ನಡಲಿ ಮಾತಾಡುವೆ. ಆದರೆ ಕೊಡಗ್‌ನ ಪರಿಸ್ಥಿತಿಯೇ ಬೇರೆ.

ಕೊಡಗ್‌ಲಿ ವಿದ್ಯೆ ಕಡಿಮೆ ಇದ್ದವು, ಹಳ್ಳಿಲಿ ಇರುವವು ಮಾತ್ರ ಅರೆ ಭಾಷೆ ಮಾತಾಡುವೆ. ವಿದ್ಯಾವಂತರ್, ಉದ್ಯೋಗಸ್ತರ್, ಪೇಟೆ ಪಟ್ಟಣಲಿ ಮನೆಕಟ್ಟಿ ವಾಸ ಮಾಡುವವು ಎಲ್ಲ ಅರೆ ಭಾಷೆ ಮಾತಾಡಿಕೆ ಭಾರಿ ನಾಚಿಕೆ ಪಟ್ಟುವೆ. ಮನೆಯೊಳಗೆ ಮಕ್ಕಳ ಕಿವಿಗೆ ಈ ಭಾಷೆ ಕೇಳಿಕೆ ಆಗದೂಂತ ಭಾರಿ ಎಚ್ಚರ ತಕಂಡವೆ. ಮಕ್ಕ ಇಲ್ಲದಿರ್‌ಕನ ಗಂಡ ಹೆಣ್ಣ್ ಗುಟ್ಟುಲಿ ಮಾತಾಡಿಕಂಡವೆ. ಎಲ್ಲವೂ ಈತರ ಮಾಡುವೇತ ನಾ ಹೇಳುದ್ಲೆ. ಬಾಳ ಜನ ಅಧಿಕಾರಿಗ, ಓದಿದ ಯುವ ಜನತೆ ಈ ತರ ಮಾಡುವೆ.

1993ನೇ ಇಸ್‌ವಿಲಿ ಆದ ಘಟನೆ ಕೇಳಿ. ನನ್ನೊಟ್ಟಿಗೆ ಒಂದನೆ ಕ್ಲಾಸಿಂದ ಹತ್ತನೆ ಕ್ಲಾಸಿಗೆ ಮುಟ್ಟ ಒಟ್ಟಿಗೆ ಓದಿದವು ಒಬ್ಬ

ಇದ್ದ. ಒಮ್ಮೆ ಅವರ ಮನೆಗೆ ಹೋದೆ. ಹಳೆ ಆತ್ಮೀಯತೆಲಿ ಮಾಮೂಲಂಗೆ ಅರೆಭಾಷೆ ಸುರು ಮಾಡ್ದೆ . ಆ ನನ್ನ ಸ್ನೇಹಿತ ಸಡನ್ ಬಹುವಚನಲಿ ನಿಂಗ ಕೊಡವಭಾಷೆಲಿ ಸುರು ಮಾಡಿ " ಅರೆಭಾಷೆ ಇಲ್ಲಿ ತಕ್ಕ್ ಪರೆವಕಾಗ. ಕನ್ನಡ ಇಲ್ಲೆಂಗಿ ಕೊಡವ ತಕ್ಕ್‌ಲ್ ಪರೆರಿ" (ನೀವು ಅರೆಭಾಷೆಲಿ ಮಾತಾಡಿ ಕಾಗದ್, ಕನ್ನಡ ಇಲ್ಲೆ ಕೊಡವ ಭಾಷೆಲಿ ಮಾತಾಡಿ) ಅಂತ ಹೇಳಿಬುಡ್ತ್. ನನ್ನ ಮೊಕಕ್ಕೆ ಮಾಯ್ಪುಲಿ ಹೊಪ್ಪಂಗೆ ಆತ್. ನಂಗೆ ಬೇಜಾರಾತ್‌ತ ಅಂವಂಗೆ ಗೊತ್ತಾತ್. ಮತ್ತೆ ನನ್ನ ಸಮಾಧಾನ ಮಾಡಿ- "ನಾವು ಮಕ್ಕಳ ಎದ್‌ರೆ ಅರೆಭಾಷೆ ಮಾತಾಡುದೇ ಇಲ್ಲೆ. ಅವ್ಕೆ ಕನ್ನಡ ಮಾತ್ರ ಕಲ್ಸಿದ್‌ಂತ ಹೇಳ್ತ್ -ಈ ತರದ ಅನುಭವ ನಂಗೆ ಸುಮಾರ್ ಆವುಟು.

ಈ ಅರೆಭಾಷೆನ ಅಷ್ಟೊಂದು ಕಡಿಮೆ ತರಲಿ ಕೊಡಗ್‌ನ ಗೌಡ ಜನಾಂಗದ ವಿದ್ಯಾವಂತರ್ ಯಾಕೆ ಕಂಡವೆ? ಅದಕ್ಕೆ ಅನೇಕ ಕಾರಣ ಉಟ್ಟು. ಇದಕ್ಕೆ ಕಾರಣ ಏನ್‌ತ 'ಕೊಡಗು ಸಂಗಾತಿಲಿ' ನಿಡ್ಯಮಲೆ ಮುದ್ದಪ್ಪನವರ ಜೀವನ ಚರಿತ್ರೆ" ಲಿ ಸರಿಯಾಗಿ ವಿವರಿಸಿಯೊಳೊ.

ಇದ್ ಅರೆಗನ್ನಡಕ್ಕೆ ಮಾತ್ರ ಬಂದ ಕಾಯಿಲೆ ಅಲ್ಲ. ಕೊಡವ ಭಾಷೆಗೆ ಇದರ ನಾಲ್ಕ್ ಪಟ್ಟ್ ಕಾಯಿಲೆ ಹಿಡ್ಕಂಡಿತ್ತ್. ಹತ್ತ್ ಜನ ಕೂಡ್ಪಲ್ಲಿ ಇಂಗ್ಲೀಷ್ ಮಾತಾಡದಂವ ಕೊಡಗರ ಪೈಕಿ ಅಸ್ಪ್ರಶ್ಯ ಅಂತ ಹೇಳುವ ಸ್ಥಿತಿ ಇತ್ತ್. ಶ್ರೀಮಂತ ಕೊಡಗರ ಮನೆಲಿ ನಾಯಿನೊಟ್ಟಿಗೆ ಕೂಡ ಇಂಗ್ಲೀಷ್‌ಲೇ ಮಾತ್‌ಕತೆ. 1978 ನೆ ಇಸ್‌ವಿಲಿ ' ಕೊಡವ ತಕ್ಕ್ ಪರಿಷತ್' ಸುರುವಾತ್. 'ಬ್ರಹ್ಮಗಿರಿ' ವಾರಪತ್ರಿಕೆ ಸುರವಾತ್. ನಾಲೈದ್ ಕೊಡವ ಸಮ್ಮೇಳನಗ ಆದೊ. ಕೊಡವ ಸಾಹಿತ್ಯ ರಚನೆ ಶುರುವಾತ್. ಮಧ್ಯಮ ವರ್ಗ ಮತ್ತೆ ಕೆಳವರ್ಗದ ಕೊಡಗರ್ ಕೊಡವ ಭಾಷೆಗೆ ಪ್ರೋತ್ಸಾಹಕೊಟ್ಟೊ. ದೊಡ್ಡ ಕೊಡಗರ ಸದ್ದ್ ಅಡಗಿ ಹೋತು. ಕೊಡವ ಭಾಷೆಗೆ ಒಂದು ಸ್ಥಾನ ಸಿಕ್ಕಿತ್.

ಅದೇ ರೀತಿ 'ಗೌಡದ[illegible]' ತೇಳುವ ಅರೆಭಾಷೆ ಸಂಚಿಕೆ ಬಂದಲ್ಲಿಂದ ವರ್ಷಕ್ಕೆ ಒಂದಾರ್ [illegible] ಸಂಚಿಕೆ ಹೊರಡಿಸಿಕಂಡ್ ಬಂದಿದ್ದರೆ ಅರೆಭಾಷೆ ಇಂದ್ ಗತ್ತ್‌ಲಿ ತಲೆಯೆತ್ತಿ ಮೆರಿತಿತ್ತ್. ಕೊಡಗು ಸಂಗಾತಿ ಹುಟ್ಟಿದ ಮೇಲೆ ಅರೆ[illegible]ಷೆಗೆ ರೆಕ್ಕೆ ಪುಕ್ಕ ಬಂದಂಗಾವುಟು. ಈ ವರ್ಷ ಮಡಿಕೇರಿಲಿ ಗೌಡ ಸಾಂಸ್ಕೃತಿಕ ನೆಲೆಗಟ್ಟ್‌ಲಿ ನಡ್ದ ಸಮ್ಮೇಳನ ಅರೆಭಾಷೆ ಮೇಲೆ ಕ್ರಾಂತಿಕಾರಿ ಬದಲಾವಣೆ ತಂದುಟ್ಟು.

' ಕೊಡಗು ಸಂಗಾತಿ' ಅರೆಗನ್ನಡದ ಏಳಿಗೆಗೆ ಒಂದು ಆಶಾಕಿರಣ. ಅದರಲ್ಲಿನ ಅರೆಭಾಷಿಕ ವಿಭಾಗಕ್ಕೆ ಹೆಚ್ಚು ಪ್ರೋತ್ಸಾಹ ನೀಡಿ.

ಇನ್ನೂ ಹೆಚ್ಚಿನ ಸ್ಥಳಾವಕಾಶ ಮಾಡಿ, ಅರೆಭಾಷಿಕ (ಅರೆಗನ್ನಡ) ಸಾಹಿತ್ಯ ಬೆಳ್ಸಿಕೆ ಹೆಚ್ಚಿನ ಅವಕಾಶ ಕಲ್ಪಿಸಿಕೊಡಕು. ಕತೆ, ಕವನ, ಹಾಸ್ಯ, ನಾಟಕ, ವೈಚಾರಿಕ ಸಾಹಿತ್ಯ ಮತ್ತೆ ಚುಟುಕು ಸಾಹಿತ್ಯ ಬೆಳ್ಲೋಕು.

ಇಂತದೊಂದು (ಸುಂದರ) ಪೊಲ್ಲುನ ಭ[illegible] ಮೇಲೆ ಕೀಳರಿಮೆ ಬೆಳ್ಸ್‌ಬಡೀಂತ ಕೊಡಗ್‌ನ ವಿದ್ಯಾವಂತ ಗೌಡರಲ್ಲಿ ನನ್ನ ಮನವಿ. ಕನ್ನಡ ಜಿಲ್ಲೆ ಗೌಡರಂಗೆ ನೀವೂ ಹೆಮ್ಮೆಲಿ ಮಾತಾಡಿ

ಅರೆಭಾಷಾಭಿಮಾನಿ
**ಬಾಚರಣೆಯಂಡ ಅಪ್ಪಣ್ಣ** ಕುಶಾಲನಗರ

---

## ನಗೆಬರಹ

ಹೈದ : ನಿನ್ನ ಪ್ರೀತಿ ಮಾಡೋ ಸುರುನ ಹೈದ ನಾನೇನಾ?
ಗೂಡೆ : ಹೌದು. ಉಳಿದವೆಲ್ಲಾ ಸ್ವಲ್ಪ ವಯಸ್ಸಾದವು.

✳

ಒಂದು ಹಾಸ್ಯ ಸಂಘದ ಸಭೆಲಿ ಒಬ್ಬ ಜೋಕ್ ಹೇಳ್ತಿತ್ತ್. ಸಭೆಲಿದ್ದವೆಲ್ಲವೂ ಬಿದ್ದ್ ಬಿದ್ದ್ ನೆಗಾಡ್ತಿದ್ದೊ. ಆದ್ರೆ ಒಬ್ಬ ಮಾತ್ರ ಸುಮ್ಮನೆ ಕುದ್ದಿತ್ತ್. ಮತ್ತೊಬ್ಬ ಅವನ ಜೊತೆಲಿ ಕುದ್ದಿದ್ದಂವ ಕೇಳ್ತ್. ಅಲ್ಲಾ... ಎಲ್ಲವೂ ನೆಗಾಡ್ಕನ ನೀನೊಬ್ಬ ಯಾಕೆ ಸುಮ್ಮನೆ ಕುದ್ದೊಳ? ಅದ್ಕೆ ಅಂವ ಹೇಳ್ತ್. ನಂಗೆ - ಅವಂಗೆ ಆದುಲೆ. ಮನೆಗೋಗಿ ನೆಗಾಡ್ನೆತ.

ಸುಮು ಗಂಡನೊಟ್ಟಿಗೆ 'ಶಹಜಹಾನ್ ತನ್ನ ಹೆಣ್ಣ್‌ನ ನೆನಪಿಗಾಗಿ ತಾಜ್‌ಮಹಲ್ ಕಟ್ಟಿಸಿದೊ. ನೀವು ನನ್ನ ನೆನಪಿಗೆ ಏನು ಕಟ್ಟಿಸಿರೆ?

ಗಂಡ: ನಿನ್ನ ತಂಗಿ ರಮನ ಕಟ್ಟಿಕಣೆ ಅಂತೇಳ್ತ್.

✳

ಮೇಷ್ಟು ಕ್ಲಾಸ್ಲಿ ಶಿಷ್ಯನೊಟ್ಟಿಗೆ "ಆಕಾಶಲಿ ಏಕ ಕಾಲಲಿ ಮಿಂಚು ಮತ್ತೆ ಗುಡುಗು ಉಂಟಾದ್ರಾ ನಾವ್ಗೆ ಮಿಂಚು ಸುರುಗೆ ಕಂಡ್ ಗುಡುಗು ನಂತರ ಕೇಳ್ಸಿದಲ್ಲಾ ಯಾಕೆ?

ಆಗ ಶಿಷ್ಯ ' ಕಣ್ಣು ಮುಂದೆ ಇದ್ದ್, ಕಿವಿ ಹಿಂದೆ ಇರ್‌ದರ್‌ಂದ ಸಾರ್' ತೇಳ್ತ್

**ಮಳ್ಳನ ಎಸ್. ವಸಂತ್ (ವಿನು)**
ಮಕ್ಕಂದೂರು

# ಕರಿಚಿನ್ನ

ಮೂಲ : ಅಶ್ವಥ್ ಅರವಿಂದ್
ಅರೆಭಾಷೆಗೆ : ಎಂ.ಇ. ಮಹಮದ್

**ಧಾರಾವಾಹಿ - 3**

*ಕಳೆದ ಸಂಚಿಕೆಲಿ.........*

**ಕಾರ್ ಸರಿ ದಾರಿಲಿ ಹೋಗದರ ನೋಡಿ ಮೀರ ದೇವಯ್ಯನ ಈ ವಿಷಯಲಿ ಕೇಳುದರ್ಲಿ ತಪ್ಪೇನ್‌ತೇಳಿ ಕೇಳ್ದ್. ಆಗ ದೇವಯ್ಯ ಅವ್ಳಿಗೆ ಜೋರು ಮಾಡಿ ಸುಮ್ಮನೆ ಕೂರ್ಸಿದೆ. ಮತ್ತೆ ಅವನೇ ಅವ್ವ ಅಪ್ಪನ ವಿಷಯ ಕೆಣ್ಕಿದೆ. ಮೀರಂಗೆ ಸಿಟ್ಟ್ ಬಂದ್ ಅವಂಗೆ ಬೈದದೆ. ನಿಮ್ಮ ಹತ್ರ ನಾವೇನೂ ಬೇಡ್ಕೆ ಬಾದ್ಲೆತೇಳ್ಕನ ದೇವಯ್ಯಂಗೆ ಸಿಟ್ಟ್ ಬಂದ್ ಕೂಡ್ಲೇ ಕಾರ್‌ಂದ ಇಳಿಯಕೆ ಹೇಳ್ದ್. ಆದ್ರೆ ಅವ್ಳಿಗೆ ಅಷ್ಟ್ ರಾತ್ರಿಲಿ ಇಳ್ದ್ ಹೋಕೆ ಧೈರ್ಯ ಬಾರ್ದೆ ಸುಮ್ಮನೆ ಕಾರ್‌ಲಿ ಕುದ್ದದೆ. ಆಗ ದೇವಯ್ಯ ಅವನ ಹಳೇ ಕಥೆನ ಅವ್ಳಿಗೆ ಹೇಳ್ತಾ ಹೋದೆ.........**

**ಮುಂದೆ ಓದಿ......**

ಅಂದರೆ ನಾಡ್‌ಕೊಲ್ಲಿ ಮಾದಪ್ಪಂಗೆ ಸಾಯದು ಇರ್ಲಿ, ಸಾವ್‌ನ ಕನ್ಸ್‌ಲಿ ಗೇನ ಮಾಡಿಕೂ ಆತ್ಲೆ. ಸತ್ತರೆ ಅವ್ವ ಇಲ್ಲದ ಮೂರು ತಬ್ಬಲಿ ಗೂಡೆಗಳ ಸ್ಥಿತಿ ಏನಾದು?

ತಾರಾ, ಗೌರ, ಮೀರಾ.

ಒಂದು ಮನೆ, ಮನೆ ಸುತ್ತ ಇರೊ ಎರಡ್ ಏಕ್ರೆ ಜಾಗ ಬುಟ್ಟ್ ಬಾಕಿ ಇದ್ದದ್ ತೀರ ಮಾರಿಬುಟ್ಟ್ ಮಾದಪ್ಪ ಸಾಲನ ತೀರ್ಸಿತ್.

ತನ್ನ ಹಿರಿ ಮಗಳು ತಾರನ ಹಣವಂತ ಕುಟ್ಟಪ್ಪನ ಮಜ ಅಯ್ಯಣ್ಣಂಗೆ ಮೊದ್ವೆಮಾಡಿ ಕೊಟ್ಟ ಮ್ಯಾಲೆ ನಾಡ್‌ಕೊಲ್ಲಿ ಮಾದಪ್ಪಂಗೆ ನೆಮ್ಮದಿನೇ ಇಲ್ಲೆ. ಆ ಹಣವಂತನ ಮಜ ತನ್ನ ಅಳಿಯ ಆಕೆ ಅಂದ್ ಅವಂಗೆ ಐವತ್ತ್ ಸಾವ್ರ ರೂಪಾಯಿ ಡೌರಿ ಕೊಡೊಕಾತ್. ಜತೆಗೆ ತಾರನ ಕುತ್ತಿಗೆ ತುಂಬ ಚಿನ್ನನ್ನು.

ಅವಳ ಮೊದ್ವೆ ಖರ್ಚಿಗೇಂತ ಅರ್ಧ ಹಣನ ಬೇರೆ ಜನಂದ ಸಾಲ ತಕಂಡಿತ್ತ್. ಎರಡ್ ಮೂರ್ ವರ್ಷದ ಒಳ್ಳೆ ಮೆಣ್ಸ್ ಫಸಲ್‌ನ ಮಾರಿರೆ ಸಾಲ ತೀರ್ಸುದು ಮಾದಪ್ಪಂಗೆ ಒಂದು ಸಮಸ್ಯೆಯೇ ಅಲ್ಲ. ಆದರೆ ಮಾರನೇ ವರ್ಷಂದ್ಲೆ ಒಳ್ಳೆ ಮೆಣ್ಸ್‌ಗೆ ಕೊಳೆರೋಗ ಬರೋಕಾ? ದೊಡ್ಡ ಮನೆಗೆ ಮೊದುವೆ ಮಾಡಿಕೊಟ್ಟ ತಾರನೂ ಇಂದ್ ನೆಮ್ಮದಿಲಿ ಇಲ್ಲೆ. ಎಷ್ಟು ಸಿಕ್ಕರೂ ಸಾಲದಂವ ಅಯ್ಯಣ್ಣ. ಅವನ ಮನೇಲಿ ಎಂತಾರ್ ಒಂದ್ ಸಮಾರಂಭ ನಡೆದರೆ ಒಂದು ದೊಡ್ಡ ಸಂಖ್ಯೆಯ ಮೊತ್ತ ಮಾದಪ್ಪ ಅದ್ಕೆ ಕೊಟ್ಟೇ ಕೊಡೋಕಿತ್ತ್. ಕೊಡ್ದೇಹೋದರೆ ಅಯ್ಯಣ್ಣನು ಅವನ ಮನೆಯವು ಹಂಗ್‌ಸ್ತಿದ್ದೊ. ಮೀರನ ಅತ್ತೆಯೋ ಹೇಳ್‌ದಕ್ಕೆ ಮುಟ್ಟಿದಕ್ಕೆಲ್ಲ ತಲೆಗೇ ಕುಟ್ಟಿದೆ, ಅಂತಾ ಹೆಂಗ್ಸ್ ಅದ್.

ಮಾದಪ್ಪ ಕಷ್ಟಲಿ ಉಟ್ಟೊಂತ ಗೊತ್ತಾದ ಮೇಲೆ ಅಯ್ಯಣ್ಣ ಮತ್ತೆ ಮನೆಯವು ಮಾದಪ್ಪನ ಮನೆಗೆ ಬಾದೂ ಬುಟ್‌ಬುಟ್ಟೊ. ತಾರ ಕೂಡ ಅಪ್ಪನ ಕಾಂಬಕೆ ಬಾತಿತ್ಲೆ.

ಕಳ್ದ್ ಹೋದ ಒಳ್ಳೆ ಕಾಲನ ಗೇನ ಮಾಡಿಕಂಡ್ ಮೀರ ಒಂದು ದೀರ್ಘ ಉಸ್‌ರ್ ಬುಟ್ಟಿತ್, ಅಂತ ಸಂದರ್ಭ ಈಗ ಬಂದರೇಂತ ಹೇಳಿ ಅವಳ್ ಮನ್ಸ್‌ಲೀ ಗೇನ ಮಾಡಕಣ್ತ್.

***

ಮಳೆ ಹೊಡಿತಲೇ ಉಟ್ಟು. ಮಾರ್ಗ ಎಲ್ಲ ತೋಡ್. ನಂಗೆ ಆವುಟು. ಮೀರನಲ್ಲಿ ಇದ್ದ ಧೈರ್ಯಕೂಡ ಕಮ್ಮಿ ಆತ್. ದೇವಯ್ಯನ ಕುರಿ ಬುದ್ದಿನ ಗೇನ ಮಾಡಿ ಅವ್‌ಳಿಗೆ ಹೆದ್ರಿಕೆ ಹೆಚ್ಚಾಕೆ ಸುರಾತ್. ಯಾರ್ದಾದ್ರ್ ಮನೆಗೆ ಹೋಗಿ ಅವರ ಕರ್ಕಂಡ್ ಜೊತೆಲಿ ಹೋಕಾಗಿತ್ತ್. ನನ್ನ ಬಚಾವು ಮಾಡಪ್ಪಾಂತ ಹೇಳಿ ಮೀರ ಮನ್ಸೊಳಿಗೆ ಕಾಣದ ದೇವ್ರಿಗೆಲ್ಲ ಕೈ ಮುಗ್ತ್. ದೇವಯ್ಯ ಕಾರ್‌ನ ಒಮ್ಮೆಗೆ ನಿಲ್ಸಿತ್.

ಹೆಡ್ ಲೈಟ್‌ನ ಆಫ್ ಮಾಡಿ ಅಲ್ಲಿಂದ ಅಂವ ಮೀರನ ಕಡೆಗೆ ಒಂದ್ ಕೆಟ್ಟ ನೋಟಲಿ ನೋಡ್ತ್. ಮೊದ್ಲೇ ಹೆದ್ರಿ ನಡ್‌ಗ್ತಾ ಇದ್ದ ಮೀರನ ಕೈಲಿದ್ದ ಪುಸ್ತಕ ಕೆಳಗೆ ಬೀತ್.

"ಹಾ. ಹ. ಹ." ನಡ್‌ಗ್ತಾ ಒಳನಾ ಗೂಡೆ? ನಾಡ್‌ಕೊಲ್ಲಿ ಮಾದಪ್ಪನ ಮಗಳಿಗೆ ಇಷ್ಟೇನಾ ಧೈರ್ಯ?

ದೇವಯ್ಯ ಗತ್ತ್‌ಲೇ ಕೇಳ್ತ್.

"ಜತೆಗೆ ಜನಗ ಇದ್ದಿದ್ದರೆ ನೀ ಹೇಂಗೆ ಆಡ್ತಿದ್ದ? ಜೋರಾಗಿ ಗಾಳಿ ಬೀಸ್ತಾ ಉಟ್ಟು, ಸ್ವಲ್ಪ ಕಮ್ಮಿ ಆಗ್ಲಿಂತೇಳಿ ನಿಲ್ಸಿದೆ. ಯಾವುದಾರ್ ಗಾಳಿಗೆ ಮರ ಮೊಗ್‌ಚಿ ಕಾರ್‌ನ ಮೇಲೆ ಬಿದ್ದರೆ ನಮ್ಮ ಅವಸ್ಥೆ ಪಂಕ್ಚರ್ ಆದ್ರಲ್ಲಿ ಸಂಶಯ ಇಲ್ಲೆ. ಹ್ಣಂ........ ಬಿದ್ದ ಪುಸ್ತಕನ ಹೆಕ್ಕಿ ತಕಾ!!





ದೇವಯ್ಯ ಹೇಳ್ತಾ ನೆಗಾಡ್ತ್. ಮೀರ ಪುಸ್ತಕನ ಹೆರ್ಕಿಕೇಂತ ಬಗ್ಗ್‌ಕಾಕನ ದೇವಯ್ಯ ಆ ಹೊತ್ತ್‌ನ ಬಳ್‌ಸಿಕೆ ನೋಡ್ತ್.

ಸಹಾಯ ಮಾಡೋಹಂಗೆ ಅವನೂ ಬಗ್ಗಿ ಬುಟ್ಟ್ ಪುಸ್ತಕ ಹೆರ್ಕೊ ನೆಪಲಿ ಅವಳ ಮೈಗೆ ಕೈ ತಾಗಿಸ್ತ್. ಅದರ್‌ಲ್ಲಿ ಅವಂಗೆ ಏನೋ ಒಂದು ಚೂರ್. ಕುಷಿ ಆದಂಗೆ ಆತ್.

ಹತ್ತ್ ನಿಮಿಷ ಕಳ್ಡ್ ದೇವಯ್ಯ ಪುನಃ ಕಾರ್ ಸ್ಟಾರ್ಟ್ ಮಾಡ್ತ್. ಮಾದಪ್ಪನ ಮನೆ ಹಕ್ಕಿಲೆ ತಲಪಿಕಾಕನ ಕಾರ್ ನಿತ್ತತ್.

ಸ್ವಲ್ಪ ಇರ್, ನಿನ್ನ ಅಪ್ಪನೋ, ಅಕ್ಕನೋ ಕೊಡೆ ತಕಂಬರ್‌ಲ್ಲೀಂತ ದೇವಯ್ಯ ಹೇಳಿರೊ, ಮೀರ ಕೊಡೆಗೊ ಕಾಯದೆ ಡೋರ್ ತೆಗ್ದ್ ಇಳ್ದ್, ಬದುಕಿದೆಯಾ ಬಡ ಜೀವವೇಂತ ಮನಸ್ಸ್‌ಲೇ ಹೇಳಿಕಂಡ್ ಮನೆಗೆ ಓಡಿಹೋತ್.

ಗೌರ ದಾರಿ ನೋಡಿಕಂಡೇ ಜಗಲ್‌ಲಿ ಕುದ್ದ್‌ಕಂಡ್ ಇತ್ತ್. ತಂಗಿನ ಕಂಡ್ ಅವಳು ಒಂದ್ ಸಮಾಧಾನದ ಉಸ್‌ರ್ ಬುಟ್ಟತ್.

"ಯಾಕೆನೆ ಮೀರ ಇಸ್ಟ್ ಹೊತ್ತ್ ಆದ್" ?

ಯಾರ ಕಾರ್‌ಲ್ಲಿ ನೀನ್ ಬಂದದ್ ?

ಗೌರ ಕೇಳ್ತ್.

"ಆ ಬೋರ್ ಗುಡ್ಡೆ ದೇವಯ್ಯನ ಕಾರದ್"

ಪುಸ್ತಕನ ಮೇಜಿನ ಮೇಲೆ ಬಿಸಾಕಿ ಸೀರೆ ಸೆರ್‌ಗ್‌ಲಿ ತಲೆ ಒರ್‌ಸಿಕಂಡ್ ಮೀರ ಹೇಳ್ತ್. ಬಸ್‌ತಡೆ, ಸ್ಟ್ರೈಕ್, ಬಾಕೆ ತಡ ಆದ್ ಎಲ್ಲನೂ ಮೀರ ಅಕ್ಕಂಗೆ ವಿವರ್‌ಸಿ ಹೇಳ್ತ್

"ಆ ಬೊಡ್ಡಿ ಮಜನ ಕಾರ್‌ಗೆ ಹುತ್ತುದು ಬೇಡಾಗಿತ್ತ್ ಯಾಕೆ ದೇವಯ್ಯ ಅಂಕಲ್‌ನ ಬೊಡ್ಡಿ ಮಜತ ಬಯ್ತಾ ಒಳ ? ಗೌರ ಆಶ್ಚರ್ಯಂದ ಕೇಳ್ತ್.

"ಹೂಂ ಅಂಕಲ್ ಗಡ. ಆ ಬೋರ್ ಗುಡ್ಡೆ ದೇವಯ್ಯನ ನಾನ್ ಬೊಡ್ಡಿ ಮಜಂತಲೇ ಕರಿಯೊದು. ನಿಂಗೆ ಅಂತ ದೇವ್ರು ಆಗಿರ್‌ದ್ರ. ಅವನ ಮಜ ರಂಜನ್‌ನ ಮೊದ್ವೆ ಆಕೆ ಆಸೆ ಹೊತ್ತವಳ್ ಅಲ್ಲಾ ನೀನ್. ಅಕ್ಕ ಒಂದು ಮಾತ್ರ ಗೇನ ಇಟ್ಟಾ. ಅಪ್ಪ ಮಜ ಇಬ್ರಿಗೂ ಹೆಣ್ಣಾಗಿ ಇರ್‌ಕೆ ತಯಾರಾಗಿ ಇದ್ದರೆ ಮಾತ್ರ ಅವನ ಮೊದ್ವೆ ಆಗೋ ಆಸೆ ಇಟ್ಟಾ.

ಮೀರ ನೆಗಾಡಿಕಂಡ್ ಹೇಳ್ತ್.

"ಮೂಳೆ ಇಲ್ಲದ ನಾಲಗೆಲಿ ಏನೆಲ್ಲಾ ಬೊಗಳ್ಬಡ, ಸ್ವಲ್ಪ ಎಚ್ಚರಂದ ಮಾತಾಡ್."

ಗೌರ ಮೀರಂಗೆ ಜೋರ್‌ಮಾಡ್ತ್.

"ಈ ಕತ್ತಲೆಲಿ, ಜಡಿ ಮಳೆಲಿ ರಂಜನ್‌ನ ಅಪ್ಪ ನಿನ್ನ ಕಾರ್‌ಲಿ ಕರ್ಕಂಡ್ ಬಂದ್ ಮನೆ ಗಂಟ ಬುಟ್ಟ್‌ಹೋದ್ ತಪ್ಪಾ?"

"ರಂಜನ್‌ನ ಅಪ್ಪ ಗಡ, ಆ ಬೊಡ್ಡಿ ಮಜನ ಅಪ್ಪಾಂತಲೇ ಕರ್ದ್ ಬುಡಿಕೆ ಏನ್ ನಿಂಗೆ ?"

ಮೀರನ ಮಾತ್ ಗೌರಂಗೆ ಸಿಟ್ಟ್ ಬರುವಂಗೆ ಇತ್ತ್.

ಅವಳು ಮುಸುಡಿನ ತಿರ್‌ಗಿಸ್ಕಂಡ್ ತಂಗೆನ ತಿಂಬಹಂಗೆ ನೋಡಿ ಅಡಿಗೆ ಮನೆಗೆ ಹೋತ್.

ಬಟ್ಟೆ ಬದಲಾಯಿಸಿಕಂಡ್ ಮೀರನೂ ಅಕ್ಕನ ಹತ್ರ ನಡ್ತ್

*(ಸಶೇಷ)*





## "ಕಟ್ಟ್"ನ ಕತೆ

ಈಗಾಗಿ ಒಂದು ಕತೆ ನಡ್ತ್. ನಮ್ಮೂರ ಚೆಂಬೂರ್ಲಿ ಕಿನುಮಣಿ ಉಳ್ಳಾಂಗಳ ಜಾತ್ರೆ ನಡ್ತ್. ಅಲ್ಲಿ ಹಬ್ಬದ ಕಟ್ಟ್ ಬಿದ್ದ ಮೇಲೆ ಯಾರೂ ಮದ್ದು - ಮಾಸ ಮಾಡಿಕಾಗದ್. ಇದ್ ಹಿಂದೆಂದ ನಡಕಣ್‌ಬಂದ ಪದ್ಧತಿ. ಆದರೆ ನಮ್ಮ ಮೇಲ್ ಮನೆ ಸೋಂಪಣ್ಣ ಗೊತ್ತಿಲ್ಲದೆ ಒಂದ್ ಕೆಲ್ಸ ಮಾಡ್ತ್. ಸೋಂಪಣ್ಣನ ಗದ್ದೆ ದೊಡ್ಡ ತೋಡು ಬದಿತ್ತ್. ಆ ಗದ್ದೆಗೆ ಕುಂಡಕೋಳಿಗ ತುಂಬಾ ಬಾತಿದ್ದೊ. ಬಂದ್ ಎಲ್ಲಾ ತಿಂದ್ ಹಾಳ್‌ಮಾಡಿ ಹೋದರ ನೋಡಿ, ಸೋಂಪಣ್ಣಂಗೆ ಸಿಟ್ಟ್ ಬಾತ್. ಮಾರ್ನೆ ದಿನ ಬಳ್ಳಿ, ಸಪೂರದ ದೊಣ್ಣೆ ತಂದ್ ಕುಂಡಕೋಳಿಗ ಬಾವ ದಾರಿಲಿ 'ಸಿಡಿ' ಹಾಕಿ ಇಸಿತ್. ಇದಾಗಿ ನಾಕ್ ದಿನಲಿ ಹಬ್ಬದ ಕಟ್ಟ್ ಬೀತ್. ಆದರೆ ನಾಕ್ ದಿನ ಸಿಡಿಗೆ ಎಂತದೂ ಸಿಕ್ಕಿತ್ಲೆ.

ಹಬ್ಬದ ಕಟ್ಟ್‌ಬಿದ್ದ್ ಎರ್ಡ್ ಮೂರು ದಿನಲಿ ಒಂದು ದೊಡ್ಡ ಕುಂಡಕೋಳಿ ಸಿಡಿಗೆ ಬೀತ್. ಸೋಂಪಣ್ಣಂಗೆ ಬಾಳ ಖುಷಿ ಆತ್. ಆಗ ಹಬ್ಬದ ಕಟ್ಟ್ ಬಿದ್ದದ್ ಗ್ಯಾನ ಆತ್. ಛೇ ಈಗ ಎಂತ ಮಾಡ್‌ದೂ? ಸಿಕ್ಕಿದನ ಬಿಟ್ರೆ ಕಷ್ಟ. ಬಿಡಿಕೆ ಮನಸ್ಸೂ ಬಾದ್ಲೆ, ಹಬ್ಬದ ಕಟ್ಟ್ ಬೇರೆ. ಎನ್ ಮಾಡ್ದು ತ್ತೇಳಿ ಯೋಚನೆ ಮಾಡಿ ದೇವ್ರುರ್ ಕಂಡಂಗೆ ಆಗಲಿ, ತಪ್ಪುಕಟ್ಟಿ ಇಸಿ ಕೊಂದ್ರೆ ಆತ್ ತೇಳಿ ಸಿಡಿ ಹತ್ರ ಹೋತ್.

"ನನ್ನ ಗದ್ದೆನ ಎಷ್ಟು ಹಾಳು ಮಾಡ್ಯೋಳ, ಇಂದ್ ನಿಂಗೆ ನಾ ಕಲ್ಸಿನೆ" ತೇಳಿ ಸಿಡಿ ಬೆರ್‌ಸಿ, ಕುಂಡಕೋಳಿನ ಕೊಂದ್ ಮನೆಗೆ ತಕ್ಕಂಡ್ ಹೋತ್. ತೊಪ್ಪುಟ ಎಲ್ಲಾ ತೆಗ್ದ್, ಅಚ್ಚುಕಟ್ಟ್ ಮಾಡಿ ಹೆಣ್ಣಿಗೆ ಕೊಟ್ಟತ್. ಹೆಣ್ಣ್ ಗೆಂಡೆ ಎಲ್ಲಾ ಹಾಕಿ ಗೈಪು ಮಾಡ್ತ್.

ಲಾಯಕ ತಿಂದ್ ಆದ ಮೇಲೆ ಸೋಂಪಣ್ಣಂಗೆ ಯೋಚನೆ ಆತ್. ಹೆದರಿಕೆನೂ ಆತ್.

ಹಂಗೂ ಹಿಂಗೂ ಕೇಳಿ ಹಬ್ಬ ಬಾತ್. ಚಾವಡಿಲಿ ಕಿನುಮಣಿ ಉಳ್ಳಾನ ದೈವ ಹೊರ್‌ಟ್, ಎಲ್ಲಾ ಆಗಿ ಭಂಡಾರ ಹಾಕ್‌ಕಾಕನ ತಕ್ಕ ಮುಖ್ಯಸ್ಥರು ಅಲ್ಲೇ ಇದ್ದೊ. ಅವರೆಲ್ಲರ ಎದುರ್ಲಿ ನನ್ನ ಕತೆ ಹಿಂಗೆ ಆವುಟುತ್ತೇಳಿ ಎಲ್ಲಾ ವಿಷಯನ ಹೇಳ್ತ್ ತಕ್ಕ ಮುಖ್ಯಸ್ಥರು ದೈವನ ಹತ್ರ ವಿಷಯ ಹೇಳ್ದೊ. ಆಗ ದೈವ ಹೇಳ್ತ್ ಹಿಂಗೆ ಹೇಳಿ ತಪ್ಪು ಹಾಕ್ಸಿರೇ ಬರುವ ವರ್ಷ ಕೂಡ ನೀ ಹಿಂಗೆ ಮಾಡ್ದು; ಇದ್ ನೀನ್ ಗೊತ್ತಿದ್ದು ಮಾಡಿಯೊಳ. ನಿಂಗೆ ಒಂದು ಕುತ್ತು ಇಸಕು ತೇಳ್ತ್.

ಆಗ ಸೋಂಪಣ್ಣ 'ಇಲ್ಲೆ ಮಾಡ್ದ್ ತಪ್ಪಾತ್ ನೋಡ್‌ಕಾಕನ ಸುಮ್ಮನೆ ಇರಿಕೆ ಮನ್ಸಾತ್ಲೆ. ಇನ್ನು ಮುಂದೆ ಮಾಡಿಕಿಲೆ ತೇಳಿ ಅಡ್ಡ ಬೀತ್. ಆಗ ದೈವ ಹೇಳ್ತ್, ಒಲೆಲಿ ನೀರಿಸಿ ಅಕ್ಕಿ ಹಾಕುದ್ ಅನ್ನ ಮಾಡಿಕೆ ತಾನೇ. ನೀನು ಬೇಕುತೇಳಿ ಮಾಡ್ದ್. ಆದರೆ ಈ ಸರ್ತಿ ಒಂದ್ಸಲ ಕ್ಷಮೆ ಕೊಟ್ಟನೆ. ತಪ್ಪು ತೇಳಿ ಭಂಡಾರಕ್ಕೆ ಹಣ ಹಾಕ್ ತೇಳಿ ಮಂಜ್ಞ ಪುಡಿ ಕೊಡ್ತ್. ಸೋಂಪಣ್ಣಂಗೆ ಖುಷಿ ಆಗಿ ಪುನಃ ಪುನಃ ಅಡ್ಡ ಬಿದ್ದ್ ಮುಂದೆ ಹಿಂಗೆ ಮಾಡಿಕಿಲೆ ತೇಳಿ ಜಾತ್ರೆ ಮುಗ್ಸಿ ಮನೆಗೆ ಬಾತ್. ಮನೆಗೆ ಬಂದ್ ಹೆಣ್ಣ್‌ಗೆ ಹೇಳ್ತ್. ನೋಡ್‌ನೇ ಇನ್ನು ಮುಂದಕ್ಕೆ ಹಬ್ಬದ ಕಟ್ಟ್‌ಲಿ ನಾನ್ ತಂದರು ಸಹ ನೀನ್ ಮಾಡಿಕ್ಕೆ ಬೊತ್ತ್‌ತೇಳಿ ಹೆಣ್ಣಿಗೆ ಕಟ್ಟಪ್ಪಣೆ ಮಾಡ್ತ್. ಇದ್ ಎಷ್ಟು ಸಮಯತ ಗೊತ್ತ್‌ಲೆ.

**ಸೂರ್ತಲೆ ಜಯಂತಕುಮಾರ್**, ಭಾಗಮಂಡಲ

## ನಗೆ ಹನಿ : ವಯಸ್ಸಾತ್ತಲ್ಲಾ?

ಸೋಂಪಜ್ಜಂಗೆ ಸುಮಾರ್ 70 ವರ್ಷದ ಹಕ್ಕಲೆ ವಯಸ್ಸಾಗಿರ್ದು. ಅವನ ಶರೀರಲಿ ತುಂಬಾ ಸಮಸ್ಯೆಗ ಇತ್ತ್. ಅದ್ಕೆ ಒಂದು ದಿನ 'ಪಿಳ್ಳಿ' ನ ಕರ್ಕಂಡ್ ಡಾಕ್ಟರ್‌ನ ಹಕ್ಕಲೆ ಹೋತ್.

ಸೋಂಪಜ್ಜ ಡಾಕ್ಟರ್ ಹಕ್ಕಲೆ ಹೋಗಿ ತನ್ನ ಸುರುನ ಸಮಸ್ಯೆನ ಹೇಳಿಕಂಡತ್.

"ನನ್ನ ಕಣ್ಣ್‌ಗಳ ಮುಂದೆ ಕಪ್ಪು ಕಲೆಗೆ ಕಾಣ್ಸಕಣ್ತಾ ಉಟ್ಟು", ಅಂತ ಹೇಳ್ತ್. ಅದ್ಕೆ ಡಾಕ್ತ್ "ವಯಸ್ಸಾತ್ತಲ್ಲಾ"? ಅದ್ಕೆ ಅಂತ ಹೇಳ್ದೊ.

ಪುನಃ ಸೋಂಪಜ್ಜ ಡಾಕ್ಟರ್ ಹತ್ರ ಕೇಳ್ತ್ -"ನಂಗೆ ಊಟ ಸರಿಯಾಗಿ ಸೇರ್ದುಲೆ" ಅದ್ಕೆ ಏನು ಮಾಡಕೂಂತಾ ಕೇಳ್ತ್. "ಅದ್ ಸಹ ವಯಸ್ಸಾತ್ತಲ್ಲಾ ಅದ್ಕೆ. ವಯಸ್ಸಾದಂಗೆ ಎಲ್ಲವ್ಕೂ ಜೀರ್ಣ ಶಕ್ತಿ ಕಡಿಮೆ ಆದೆ" ತಾ ಹೇಳ್ದೊ.

ಸೋಂಪಜ್ಜ ಮತ್ತೊಂದು ತೊಂದರೆನ ಸಹ ಹೇಳಿಕಣ್ತ್ "ನಂಗೆ ಸೊಂಟ ಬೇನೆ ಉಟ್ಟು. ಒಂದೊಂದು ಸರ್ತಿ ತುಂಬಾ ಬೇನೆ ಆದೆ. ಸಹಿಸಿಕೆ ಬೊತ್ತ್" ತ ಹೇಳ್ದೆ. ಅದಕ್ಕೇ ಡಾಕ್ತ್ "ವಯಸ್ಸಾತಲ್ಲಾ? ಅದ್ಕೆ ತಾ ಒಂದೇ ಉತ್ತರ ಕೊಟ್ಟವೆ.

ಸೋಂಪಜ್ಜಂಗೆ ಎಲ್ಲಿತ್ತೊ ಸಿಟ್ಟ್. ಸಿಟ್ಟ್ ತಡೆಯಕೆ ಆತ್ಲೆ. ಈ ಡಾಕ್ಟರ್ ತುಂಬಾ ಒಳ್ಳೆ ಡಾಕ್ಟರ್ ಇರ್ದುತಾ ಇಲ್ಲಿಗೆ ನಾನ್ ಬಂದರೆ ಇಲ್ಲಿ ಇಂವ ಹಿಂಗೆ ಹೇಳ್ದೆಲ್ಲಾ. ಏನ್ ಮಾಡ್ದು ಈಗ? ದೊಡ್ಡದಾಗಿ ಬೋರ್ಡ್ ಮಾತ್ರ ಹಾಕಿಟ್ಟು. ಆ Degree (ಡಿಗ್ರಿ) ಓದಿಕೆ 1 ಗಂಟೆ ಸಹ ಸಾಲ್ದುಲೆ. ಅಂತಂವಗೆ ನನ್ನ ಖಾಯಿಲೆನ ವಾಸಿ ಮಾಡಿಕೆ ಆದುಲೆ. ಈ ಖಾಯಿಲೆನ ವಾಸಿ ಮಾಡಿಕೆ ಆಗದ ಮೇಲೆ ಆದುಲೆತಾ ಹೇಳಿಕೆ ಬೊತ್ತಾ? ನಾನ್ ಬೇರೆ ಡಾಕ್ಟ ಹಕ್ಕಲೆ ಹೋಗ್ತಿದ್ದೆ ಅಲ್ಲಾ? ಅಂತ ಜೋರಾಗಿ ಸಿಟ್ಟ್‌ಲಿ ಹೇಳಿಕೆ ಶುರು ಮಾಡ್ತ್.

ಅದ್ಕೆ ಡಾಕ್ತ್ ಹೇಳ್ದೊ ತುಂಬಾ ರೇಗಾಡ್‌ಬಡಿ ನೀವು ತುಂಬಾ ತಾಳ್ಮೆಗೆಡ್ತಾ ಒಳರಿ " ಇದ್ ಸಹ ಮುದಿ ವಯಸ್ಸ್‌ನ ಮತ್ತೊಂದು ಖಾಯಿಲೆ " ಅಂತ ಡಾಕ್ತ್ ತುಂಬಾ ಸಮಧಾನಂದ ಹೇಳ್ದೊ "ವಯಸ್ಸಾತ್ತಲ್ಲಾ ".

**ನೀತು ಮಾಚಯ್ಯ**, *ಬೆಂಗಳೂರು*



# ಕೊಡಗು ಸಂಗಾತಿಯ ಹುಟ್ಟು ಹಬ್ಬ

ಹುಟ್ಟುಹಬ್ಬ ನಿನ್ನದಿಂದ್ ಕೊಡಗು ಸಂಗಾತಿ
ಮರಿದು ನಾನ್ ಹೇಂಗೆ ನೀನ್ ನಮ್ಮ ಸಂಗಾತಿ ।
ವರ್ಷ ಒಂದ್ ಆತ್ ನಿಂಗೆ ಗೊತ್ತೊ ಸಂಗಾತಿ
ಬಯಸುತೊಳೊ ಜನಂಗ ನಿಂಗೆ ಬರ್ಲಿ ಸದ್ಗತಿ ॥

ಕೊಡಗ್ ಸಂಗಾತಿ ಕೂಸ್‌ಈಗ ಒಂದ್ ವರ್ಷದ್
ನಿನ್ನ ಸಾಂಕಿ ಸಲಹುದೆಲ್ಲ ನಮ್ಮ ಕೆಲ್ಸದ್ ।
ನೀನ್ ಬಾಳಿ ಬೆಳ್ಗೊಕುಂತ ನಮ್ಮ ಭಾವನೆ
ಹೆದ್‌ರಬಡ ನಾವ್ಗೆ ಉಟ್ಟು ನಿನ್ನ ಯೋಚನೆ ॥

ನಿಂಗೆ ಇಲ್ಲೆ ಹಣಾ ಕೂಡ ಬೇಧಭಾವನೆ
ಎಲ್ಲರಲ್ಲಿಗೋವ ನೀನ್ ಬುಟ್ಟ್ ವಂಚನೆ ।
ತಿಂಗಳಿಗೆರ್ಡ್ ಸರ್ತಿಭಾವ ನೀನ್ ನಾವುಗೆ
ಮನಕೆ ಹರ್ಷ ತಾವ ಹೂವುನಾಂಗೆ ಮಲ್ಲಿಗೆ ॥

ಕೊಡಗು ಸಂಗಾತಿ ಸುರುಗೆ ನನ್ನ ಮನೆಗೆ ಬಾಕನ
ಹೊರಗೆ ನಾನ್ ಹೋಗಿದಂದ್ ಯಾಕೊ ಒಂದಿನ ।
ಮನೆಗೆ ಪುನ ಬಾಕನ ನಾನ್ ಸಂಗಾತಿ ಕಾಯ್ತಿತ್
ಅದರ ತೆಗ್‌ದ್ ಓದಿನಂಗೆ ಅಶ್ಚರ್ಯಾಗಿತ್ತ್ ॥

ಅರರೆ ಅರೆಭಾಷೆಲಿದ್ ಅಚ್ಚು ಆಗುಟು
ಹಾಂಗೆ ಒಂದೊಂದೆ ಓದಿದದರ ವಿಷಯ ತುಂಬುಟ್ಟು ।
ಅರೆಭಾಷೆ ಕಥೆ ಕವನ ಅದರ್ಲಿ ಸೇರಿಟ್ಟು
ಎಂತದ್ ಹೇಳ್ದು ಪತ್ರಿಕೆ ಸಂಗಾತಿ ಜೋರುಟ್ಟು ॥

ಕೆಲವು ಜನಂಗ ಈಗ ಹೊಟ್ಟೆಕಿಚ್ಚಿ ಪಟ್ಟವೆ
ಹೇಳಿ ಏನ್ ಅದ್ಕೆ ಅವು ಶ್ರಮಪಟ್ಟವೆ ।
ಯಾರೊ ನಮ್ಮವು ಹೋದರಿಂದ್ ಒಳ್ಳೆ ಕೆಲ್ಸಕೆ
ಕಾಯುತಿದ್ದವೆ ಕೆಲವು ಜನಂಗ ಅವರ ಕೆಡ್ಸಿಕೆ ॥

ತಾನು ಮುಂದೆ ಹೋಕಿಲ[illegible] ಪರರ ಬುಡಿಕಿಲೆ
ಅಂತವರ್‌ಂದ ಒಳ್ಳೆ ಕೆ[illegible]ನು ಆಕಿಲೆ ।
ಒಂದೆ ಹೇಳಿ ಇಂತದು[illegible]ಷ್ಟೋ ಪತ್ರಿಕೆ
ಯಾಕೆ ಇಂದ್ ಹೋದುಲವು ಅದರ ಹತ್ರಕೆ ॥

ನಮ್ಮ ಮೈನ ನಾವೆ ತೊರ್ಸಿ ಗಾಯ ಮಾಡುದು
ನಾವ್ಗೆ ನಾವೆ ವೈರಿ ಆಗಿ ಯಾಕೆ ಬಾಳುದು ।
ತಾನ್ ಮಾಡ್ದ ಕೆಲ್ಸಲಾದ ಲಾಭ ನಷ್ಟಕೆ
ತಾನೆ ಹೊಣೆ ಅದರ ನಾವು ಕೇಳುದೆಂತಕೆ ॥

ಕೊಡಗು ಸಂಗಾತಿ ಹೆಸರ್ ಇಸಿದ್ ಪತ್ರಿಕೊಂದರ
ಮಾಡುತಿರುವ ಮೊನ್‌ಷ ಅವೆ ಪಟ್ಟಡ ಪ್ರಭಾಕರ ।
ಮೆಚ್ಚೊಕಿಂದ್ ನಾವು ಅವು ಮಾಡ್ದ ಕೆಲ್ಸಕೆ
ಎಚ್ಚರಿಕೆಲಿ ಹೋಕು ಅವು ಇನ್ನೂ ಮೇಲಕೆ ॥

ಗೌಡ ಭಾಷೆಲಿಲ್ಲೆ ನಾವ್ಗ ಒಂದದ್ ಪತ್ರಿಕೆ
ಪತ್ರಿಕೆ ಮಾಡ್ದು ಬೆಟ್ಟದಸ್ಟೆ ಕಷ್ಟ ಹತ್ತಿಕೆ ।
ಅವರ ಕಷ್ಟ ನಷ್ಟ ನೀವು ಕೇಳ್ದುಲೆಂತಕೆ
ಅವರ ಬೈದ್ ಅಲ್ಲಿ ಇಲ್ಲಿ ತೆಗಳುದೆಂತಕೆ ॥

ನಾವ್ಗೂ ಬೇಕು ತಿಂಗಳೊಂದೊ ಎರಡ್ ಪತ್ರಿಕೆ
ಅದರ ಓದಿ ನೀವುಗೆ ಆದುಲೊ ಸುಮ್ಮನೆ ಕುದ್ರಿಕೆ ।
ನಿಮ್ಮ ಲೆಕ್ಕ ಕಷ್ಟಲವು ಪತ್ರಿಕೆ ಮಾಡೊಕು
ನಿವ್ಗೂ ಕುಶಿ ಆಗಿದ್ ಅವು ಸೋಲ್ದು ನೋಡೊಕು ॥

ಜನಂಗ ಎಲ್ಲ ಮಾಡ್ದು ಕೆಲ್ಸ ಲಾಭಕ್ಕಾಗಿದ್
ಅದ್ಕೆ ಹಳ್ಳಿ ಬುಟ್ಟ್ ಅವು ಪೇಟೆಗೋಗದ್ ।
ನಿಮ್ಮ ಮನೆನ ಲೆಕ್ಕಚಾರ ಅವು ಕೇಳ್ದುಲೆ
ನೀವುಗೆ ಬಂದ ಲಾಭನ ನೀವು ಅವ್ಕೂ ಕೊಡ್ದುಲೆ ॥

ನಿಮ್ಮ ಲಾಭದ ದುಡ್ಡ್ ನಿಮ್ಮ ಕುಟುಂಬ ಸುಖಕ್ಕೆ
ಪಟ್ಟಡ ಪ್ರಭಾಕರ ಮಾಡ್ದೆ ಕೆಲ್ಸ ಜನರ ಹಿತಕ್ಕೆ ।
ತಾನ್ ಮಾಡ್ದ ತೊಪ್ಪು ಮುಚ್ಚಿ ಪರರ ತೊಪ್ಪುನ
ಎತ್ತಿ ಹಿಡಿವ ನಿಮ್ಮ ಬುದ್ಧಿ ಹೇಳ್ದು ಯಾಕೆನ ॥

ಬೊಯ್ಯುವ ಬದಲ್ ಅವರ ಕೆಲ್ಸ ನೀವೆ ಮಾಡಿದ್
ಮೇಲೆಕ್ಕೋಗಿ ಅವರ ನೀವು ಕೆಳಗೆ ಹಾಕಿದ್ ।
ನಿಮ್ಮ ಹೆಸರ್ಲಿ ಪತ್ರಿಕೊಂದ್ ಹೊರಗೆ ಬಂದರೆ
ತೆಕೊಂಬೊ ನಾವು ನೀವ್ಗ ಇಲ್ಲೆ ಏನು ತೊಂದರೆ ॥

ಅವರ ಬೈದ್ ಏನು ಆದುಲೆ ಇರಿಸಿ ಸುಮ್ಮನೆ
ಬಯಸಿ ಗೌಡ ಜನಂಗ ಮೇಲೆ ಭಾವ ಭಾವನೆ ।
ಪಟ್ಟಡ ಪ್ರಭಾಕರ ಅವಂದ್ರಾಗಿ ಗೌಡ ಪತ್ರಿಕೆ
ಸುರುನು ಆತ್ ಗೌಡ ಭಾಷೆ ಹೊರೆಗೆ ಕಾಂಬಕೆ ॥

ಅದ್ಕೆ ನಾವು ಅವುಕೆ ಇಂದ್ ತುಂಬಾ ಗೌರವ
ಕೊಟ್ಟೆ ಕೊಡುಕು ಅವ್ಕ ಉಟ್ಟು ತುಂಬಾ ಅನುಭವ ।
ಒಳ್ಳೆ ಕೆಲ್ಸ ಯಾರು ಮಾಡ್ರು ಅವರ ಹೊಗೊಳುಕು
ಕೆಟ್ಟಕೆಲ್ಸ ಮಾಡ್ರೆ ಮಾತ್ರ ಅವರ ತೆಗೊಳೊಕು ॥

ಎಷ್ಟೊ ಜನಂಗ ಪತ್ರಿಕೆಗಿಂದ್ ದುಡ್ದೆಕೊಡ್ದುಲೆ
ಧರ್ಮಕಿದ್ ಬಾದುಂತೇಳಿ ಅವರ ಮನ್ಸ್‌ಲೆ ।
ಪುಸ್ತಕ ನಿಮ್ಮ ಮನೆಗೆ ಬಂದರೆ ದುಡ್ಡ್‌ಕಳ್‌ಸೊಕು
ಪತ್ರಿಕೆ ಮಾಡಿಕೆ ಕಷ್ಟ ಉಟ್ಟು ಸಹಾಯ ಮಾಡೊಕು ॥

ಜನರ ಬೆಂಬಲಿದ್ದರುಟ್ಟು ಎಲ್ಲ ಕೆಲ್ಸನು
ಅದ್ ಇಲ್ಲದಿದ್ದರಿರ್ದು ಕಷ್ಟ ನಷ್ಟನು ।
ಅಸ್ಟ್ ನೀವುಗೆ ಅರ್ಥ ಮಾಡಿಕೆ ಆಗದಿದ್ದರೆ
ಕಷ್ಟ ಉಟ್ಟು ನಮ್ಮ ಜನಂಗ ಮೇಲೆ ಬರಕೊರೆ ॥

ಬರಹಗಾರರೆಲ್ಲವುಕೆನು ಒಳ್ಳದಾತಿದ್
ಕೊಡಗ್ ಸಂಗಾತಿ ಪತ್ರಿಕೊಂದ್ ಹೊರೆಗೆ ಬಂದದ್ ।
ಇದರ್‌ಂದಾಗಿ ಜನರ ಕಥೆ ಪದ್ಯ ಲೇಖನ
ಸಂತೋಷಾದು ಅಚ್ಚಿ ಆಗಿ ಅವ್ಕ ಬಾಕನ ॥

ಕೆಲವು ಜನಂಗ ಪತ್ರಿಕೆಲಿ ಲಕ್ ಬರ್ದವೆ
ಇನ್ನ್ ಕೆಲವು ಜನಂಗ ಬರೆಕೆ ಈಗ ಕಲ್ತಿವೆ ।
ಹೆಂಗೂ ಇರ್ಲಿ ಕೊಡಗು ಸಂಗಾತಿ ಒಳ್ಳೆಪುಸ್ತಕ
ಅದರಿಂದಾಗಿ ಹೊಳ್ಪು ಬರ್ಲಿ ಜನರ ಮಸ್ತಕ ॥

ಹುಟ್ಟುಹಬ್ಬಕಿಂದ್ ನಾನ್ ನಿಂಗೆ ಉಡುಗೊರೆ
ಕೊಡುತ ಒಳೆ ಪದ್ಯ ಬರ್ದ್ ಮನ್‌ಸ್‌ಲಾಸರೆ ।
ವರ್ಷ ಇಡಿ ಹರ್ಷ ತಾದು ನಿನ್ನ ಕೆಲ್ಸದ್
ನಿಂಗೆ ಶುಭ ಹರ್ಸುದೀಗ ನನ್ನ ಕೆಲ್ಸಿದ್ ॥

*ರಚನೆ* : ಹೊದ್ದೆಟ್ಟಿ ಭವಾನಿಶಂಕರ್





## ಕವನ

ಗಾಳಿಗೆ ರಂಗಿಲ್ಲೆ ಮೋಡಕ್ಕೆ ನೆಲೆಯಿಲ್ಲೆ
ಅಪ್ಪಾನ ಮನೆ ಸ್ಥಿರಯಿಲ್ಲೆ || ಹೆಣ್ಣಿಗೆ||
ಗಂಡನ ಮನೆಲಿ ಬಾಳೋಕು || ಗಂ||

ಅಪ್ಪನ ಕೊಡಿಕೂಸು ಅಪ್ಪಾನ ಕೊಂಡಾಟ
ಇದೆಲ್ಲ ಮರ್ತ್ ನೀ ಮಗಳೇ || ಮಗಳೇ||
ಗಂಡಾನ ಮನೇಲಿ ಬಾಳೋಕು || ಗ||

ನೆರೆಯವರೊಟ್ಟಿಗೆ ನೀ ಲಾಯಿಕಿರೋಕು ಮಗಳೇ
ಮನೆಯೊಳಗೆ ಭೇದ ತರ್‌ಬಾಡ ||ಮಗಳೆ||
ತುಂಬಿದ ಮನೆನ ಒಡಿಬಾಡ ||ತು||

ಬೇಲಿ ಮೇಲಿದ್ದ ಹೂ ಲಾಯಿಕಿದ್ದರೇನ್?
ಮಲ್ಲಿಗೆ ಹೂನಂಥ ಮನೆಗಂಡನ ಬುಟ್ಟ್ || ಮಗಳೇ||
ಬೇರೆ ಹೈದಂಗಳ ಗ್ಯಾನ ಮಾಡ್‌ಬಾಡ || ಬೇರೆ||

ಅತ್ತೆ ಮಾವನ ಮನೆಲಿ ಲಾಯಿಕಿರೋಕು ಮಗಳೇ
ಸಂಸಾರನೆಂದೂ ದೂರ್ ಬ್ಯಾಡ್ ||ಮ||
ತೌವುರಿಗೆ ಒಳ್ಳೆ ಹೆಸ್ರು ತರೋಕು ||ತ||

ಜರಿಸೀರೆಗೆ ಮುತ್ತಿನ ಮಡಿಲಕ್ಕಿ
ಮೆಟ್ಲು ಮೆಲ್ಲೆ ಇಳಿಯವ್ವ ||ಮ||
ನಿ ಸೇರ್‌ದ ಮನೇಲಿ ಲಾಯಿಕಿರೋಕು ||ನೀ||

ಹಿರಿಯವುಕೆ ನೀ ಉತ್ತರ ಕೊಡ್‌ಬ್ಯಾಡ
ಹಿರಿಯವರ ಮೀರಿ ನಡಿಬಾಡ || ಮಗಳೇ||
ಲಾಯಕಾಗಿ ಬಾಳ್ ನಡ್‌ಸೋಕು ||ಲಾಯಿಕಾಗಿ||

ಗಾಳಿಗೆ ರಂಗಿಲ್ಲೆ ಮೋಡಕ್ಕೆ ನೆಲೆಯಿಲ್ಲೆ
ಅಪ್ಪಾನ ಮನೆ ಸ್ಥಿರಯಿಲ್ಲೆ || ಹೆಣ್ಣಿಗೆ ||
ಗಂಡಾನ ಮನೇಲಿ ಬಾಳೋಕು

**ಉಳುವಾರನ ಶಾಂತಿ ಪೊನ್ನಪ್ಪ, ಅಬ್ಬಿಗುಂಡಿ**

---

## ನಿಮಗಿದು ಗೊತ್ತೆ

1) ವಿಶ್ವದ ಅತಿ ದೊಡ್ಡ ದ್ವೀಪ : ಗ್ರೀನ್‌ಲ್ಯಾಂಡ್
2) ಕನ್ಯಾಕುಮಾರಿಯ ಇಂಗ್ಲೀಷ್ ಹೆಸರು : ಕೇಪ್ ಕ್ಯಾಮರಿನ್
3) ವಿಶ್ವದಲ್ಲೇ ಅತಿ ಚಿಕ್ಕ ರಾಷ್ಟ್ರ : ವ್ಯಾಟಿಕನ್ ಸಿಟಿ
4) ಭಾರತದಲ್ಲಿ ಮೊದಲು ತಯಾರಾದ ಚಲನಚಿತ್ರ : ರಾಜ ಹರೀಶ್ಚಂದ್ರ
5) ರವೀಂದ್ರನಾಥ ಠಾಕೂರರು ನಟಿಸಿರುವ ಚಿತ್ರ : ವಾಲ್ಮೀಕಿ ಪ್ರತಿಮಾ
6) ಮಾನವನ ನಂತರ ಬುದ್ಧಿವಂತಿಕೆಗೆ ಹೆಸರಾದ ಪ್ರಾಣಿ : ಡಾಲ್ಫಿನ್
7) ಅತೀ ದೊಡ್ಡ ನೀರಿನ ಹಾವು : ಅನಕೊಂಡ
8) ವಿಶ್ವದ ಅತೀ ಆಳವಾದ ಸ್ಥಳ : ಛಾಲೆಂಜರ್ ಡೀಪ್
9) ಇಂಗ್ಲೀಷ್ ಕಾಲುವೆಯ ಉದ್ದ : 564ಕಿ.ಮಿ.
10) ಮಾರ್ನಿಂಗ್ ಸ್ಟಾರ್ ಎಂಬ ಗ್ರಹ : ಶುಕ್ರ



## ಮಹಾತ್ಮ ಗಾಂಧೀಜಿಯವರ ಹೊನ್ನುಡಿಗಳು

1) ತೃಪ್ತಿ ಇರುವುದು ಪ್ರಯತ್ನದಲ್ಲಿ, ಸಿದ್ದಿಯಲ್ಲಲ್ಲ.
ಪೂರ್ಣ ಪ್ರಯತ್ನವೇ ಪೂರ್ಣ ವಿಜಯ.

2) ಮನುಷ್ಯನ ಬುದ್ಧಿಯ ಪ್ರಗತಿಗೆ ಮಿತಿ ಇದೆ.
ಆದರೆ ಹೃದಯದ ಗುಣಗಳ ಬೆಳವಣಿಗೆಗೆ ಯಾವ ಎಲ್ಲೆಯೂ ಇಲ್ಲ.

3) ಶಕ್ತಿ ದೈಹಿಕ ಬಲದಿಂದ ಬರುವುದಿಲ್ಲ.
ಅದು ಬರುವುದು ಅದಮ್ಯವಾದ ಸಂಕಲ್ಪದಿಂದ.

4) ಪ್ರಾರ್ಥನೆಯಲ್ಲಿ ಹೃದಯವಿಲ್ಲದ ಶಬ್ದಗಳು ಇರುವುದಕ್ಕಿಂತ
ಶಬ್ದಗಳೇ ಇಲ್ಲದ ಹೃದಯವಿರುವುದು ಉತ್ತಮ.

**ಸಂಗ್ರಹ : ವಿನು**



# ಮೊಮೆಂಟೋ ಬರ್ಸಿದ ಕಾಗ್ದ

ಸುಮಾರ್ ಮೂರು ವರ್ಷದ ಹಿಂದೆನ ಮಾತ್. ಯಾವ್ದೊ ಕೆಲ್ಸಕ್ಕೆ ಅಪ್ಲಿಕೇಶನ್ ಹಾಕಕ್ಕೊಂತ ಒಂದ್ ದಿನ ರಜೆ ಹಾಕಿ ಮನೆ ಕಡೆ ಹೋಗಿದ್ದೆ. ಆ ಸರ್ಟಿಫಿಕೇಟ್‌ಗಳ ಜೋಡ್ಸುದೇ ಒಂದು ಕಷ್ಟದ ಕೆಲ್ಸ. ಹಾಂಗೆ ಅದ್ಕೆ ಬೇಕಾದ ಸರ್ಟಿಫಿಕೇಟ್‌ಗಳೆಲ್ಲಾ ಜಗ್‌ಲ್‌ಲಿ ಕುದ್ದ್‌ಕಂಡ್ ಚೋಡಿಸ್ತಾ ಇದ್ದೆ. ಹಾಂಗೆ ಸರ್ಟಿಫಿಕೇಟ್ ಮೇಲೆ ಕಣ್ಣ್ ಹಾಯ್ಸಿ ನೋಡ್ಕನ "ರಾಜ್ಯ ಮಟ್ಟದ ಭಾವಗೀತೆ ಸ್ಪರ್ಧೆಯಲ್ಲಿ ಪ್ರಥಮ" ಅಂತೇಳುವ ಪದಗಳ ಓದಿ ಅಲ್ಲೇ ಜಗುಲಿ ಬಾಜರ್ ಮೇಲೆ ಇಸಿಕಂಡಿದ್ದ ನನ್ನ ಪ್ರೈಸ್‌ಗಳ ಕಡೆ ಕುತ್ತಿಗೆನ ತಿರ್ಗಿಸಿದೆ. ಆಗ ಅಲ್ಲಿದ್ದ ಶಿಲಾಬಾಲಿಕ ರೀತಿಯ ಮೊಮೆಂಟೋ ನನ್ನ ನೋಡಿ ಕರ್ದಂಗೆ ಆತ್. ಮತ್ತೆ ಮತ್ತೆ ಕಣ್ಣ್ ಕೀಳದೆ ದಿಟ್ಟಿಸಿದೆ. ಆ ಶಿಲಾಬಾಲಿಕಾ ಮೊಮೆಂಟೋ ಮರ್ಗುವ ಹಾಂಗೆ ಕಂಡತ್. ಮತ್ತೆ ಸ್ವಲ್ಪ ಹೊತ್ತ್‌ಲಿ ಅದ್ ಮಾತಾಡಿಕೆ ಸುರು ಮಾಡಿಯೇ ಬುಟ್ಟಿತ್. "ನೀ ಯಾಕೆ ಇಲ್ಲಿ ತಂದಿಸಿದ ನಮ್ಮ? ನಾವ್ಗೆ ಒಂದು ಸ್ವಲ್ಪನೂ ಮಾನ ಮರ್ಯಾದೆನೇ ಇಲ್ಲೆನಾ..........? ಅದರ ಕೊಡದಿದ್ದರೂ ಬೇಡ ನಮ್ಮ ಅವಸ್ಥೆನ ಒಮ್ಮೆ ನೋಡು". ಅಂತ ಹೇಳ್ತ್. ನನ್ನ ಏನೂಂತ ತಿಳ್ಕಂಡ? ನಾ ಅಂತಿಂಥ ಮನೆಂದ ಬಂದಂವ ಅಲ್ಲ, ನನ್ನ ತಯಾರ್ ಮಾಡಿಕೆ ಒಂದ್ ತಿಂಗ ತಕಂಡಿದ್ದ. ನನ್ನ ನೈಸ್ ಮಾಡಿ, ಒಳ್ಳೆ ಚಿತ್ರ ಬರ್ದ್, ಒಳ್ಳೆ ಗೊಂಬೆ ಕಂಡಂಗೆ ಮಾಡಿ, ನೋಡ್‌ದವ್ಕೆ ಒಮ್ಮೆ "ಜುಂ" ಅಂತೇಳುವಾಂಗೆ ಶೋಕೇಸ್‌ಲಿ ಇಸಿ ಖುಷಿ ಪಡ್ತಿದ್ದ. ಅಂಥಂವ ಇಲ್ಲಿಗೆ ಬಂದ್ ಬಿದ್ದೆ. ಎಷ್ಟ್ ಜನ ನನ್ನ ನೋಡಿ ಹೋಗ್ತಿದ್ದ............ ಹೋಗುವವ್ ಎಷ್ಟ್ ಜನ.......... ಬರುವವು ಎಷ್ಟ್ ಜನ.......... ಆಗ ನನ್ನ ಮೈಲಿ ಒಂದು ಚೂರಾದರೂ ಧೂಳು ತೇಳ್ದು ಇತ್ತಾ ? ಒಂದು ಗಲೀಜ್ ಅಂತೇಳ್ದು ಇತ್ತಾ? ದಿನಾಲು ಹೊಸ ಬಟ್ಟೆಲಿನನ್ನ ಒರ್‌ಸ್ತಾ ಇದ್ದ. ಒಂದ್ ಸರ್ತಿ ಒರ್ಸಿದ ಬಟ್ಟೆಲಿ ಮತ್ತೊಮ್ಮೆ ಒರ್‌ಸ್ತಿತ್ಲೆ. ಈಗ ಕಾಂಬದ್ಲೆನಾ? ನನ್ನ ಕೇಳುವವು ಹೇಳ್‌ವವು ಯಾರ್ ಇಲ್ಲೆ. ನನ್ನ ಮೆಟ್ಟಿಕಂಡ್ ಓಡಾಡವು ಎಷ್ಟ್ ಬೇಕು. ಅದ್ ಇಲಿ ಅಂತಿಲ್ಲೆ.. ಪಲ್ಲಿ ಅಂತಿಲ್ಲೆ.. ಹಾಂತೆ ಅಂತಿಲ್ಲೆ... ಸೊಳ್ಳೆಗಾ ಅಂತಿಲ್ಲೆ, ಎಲ್ಲಾ ರಾಜಾ ರೋಷಲಿ ಓಡಾಡಿ ನನ್ನ ಮೇಲೆ ಹಿಕ್ಕಿ ಹಾಕಿ ಮೆರ್ಕತಾ ಒಳ. ಬೇಡಾಂತ ಹಾಂಕಾರಲಿ ಹೋವುಟು. ನಂಗೆ ಉಸಿರಾಡಿಕೆ. ಆಗದಾಂಗೆ ಬಲೆನ ಹೆಣ್ದ್ ಸಂಸಾರ ನಡೆಸ್ತಾ ಉಟ್ಟು. ಇದೆಲ್ಲಾ ನಿಂಗೆ ಕಾಂಬೊದ್ಲೆನಾ? ಬುರ್......... ಅಂತ ಮನೆಗೆ ಬಂದ್ಯಾ ಹೋದ್ಯ........ ನನ್ನ ವಿಚಾರಿಸಿ ನೋಡಿಕಣೆಕ್ಕಂತೂ ನಿಂಗೆ ಪುರುಸೊತ್ತೇ ಇಲ್ಲೆ ಬುಡ್. ನೀ ಯಾಕೆ ಹಿಂಗೆ ನನ್ನ ನರಕ ಬರ್ಸಿಯಾ ಹೇಳ್? ನಿಂಗೂ ಒಂದ್ ಅಂತಃಕರಣ ಉಟ್ಟೊಂತಾದರೆ ನಾವ್ಗೆ ಮೋಕ್ಷಕೊಡ್ಸ್ ಅಂತೇಳಿ ನನ್ನನ್ನೇ ಮರ್ಗಿಸಿ ಬುಡುವಷ್ಟ್ ಮಾತಾಡಿ ತಲೆ ಕೆಡ್ಸಿತ್. ಇಷ್ಟ್ಯಾಕಾಕನ ನನ್ನ ಅಣ್ಣನ ಮಜ ಶಾಲೆಂದ ಓಡಿ ಬಂದ್ ಅತ್ತೆ...... ಅಂತ ಕರಿಯಕಾಕನ ಕುತ್ತಿಗೆನ ಇತ್ತ ತಿರ್ಗಿಸಿದೆ. ಹಾಂಗೆ ಸಾಯಂಕಾಲ ಕಳ್ದ್ ರಾತ್ರೆ ಎಲ್ಲಾ ಇದರ ಬಗ್ಗೆ ಯೋಚಿಸಿದೆ. ನಿಜಕ್ಕೂ ಆ ಬಾಜಾರ್‌ಲಿ ಒಂದ್ ಇಂಚ್ ಧೂಳ್ ಕುದ್ದ್ ಜೇಡ ಲಾಯ್‌ಕಲಿ ಬಲೆ ಹೆಣ್‌ದಿತ್ತ್. ನಂಗೆ ಮನೆ ಮಂದಿಮೇಲೆ. ಕೋಪನೂ ಬಾತ್, ಬೇಸರನೂ ಆತ್. ಹೆಂಗೊ ಇದರ ಸರಿಯಾಗಿ ನೋಡಿ ಕಣ್‌ವವು ಯಾರು ಇಲ್ಲೆ. ಇದರ ಮೈಸೂರಿಗೆ ತಕಂಡ್ ಹೋದೆ ಸರಿ. ಅಲ್ಲಿ ಅದ್ಕೆ ಪಾಲಿಶ್ ಮಾಡ್ಸಿ ಲಾಯ್‌ಕಲಿ ಇಸಕೂಂತ ನಿರ್ಧಾರ ಮಾಡ್ದೆ.

ಮರುದಿನ ಒಂದ್ ದೊಡ್ಡ ಬ್ಯಾಗ್‌ಲಿ ಅದರ್ನೆಲ್ಲಾ ತುಂಬಿಸ್‌ಕಂಡ್ ಮನೆಂದ ಮೈಸೂರಿಗೆ ಹೊರಟೆ. ಬಸ್ಸ್‌ಲಿ ಕಾಲಿಸಿಕೂ ಜಾಗ ಇಲ್ಲೆ. ಅಷ್ಟ್ ರಶ್. ಅಂತೂ ಹೆಂಗೋ ನುಗ್ಗಿ ಬಸ್ಸ್‌ನ ಮೆಟ್ಲ್‌ಲೇ ನಾ ಕುದ್ದ್ ಹಕ್ಕಲೇ ಬ್ಯಾಗನ ಇಸಿಕಂಡೆ. ಆಗಷ್ಟೆ ಜರ್ಮನಿಂದ ನಾ ತಂದಿದ್ದ "ವಾಕ್ ಮೆನ್" ನ ನನ್ನ ಕೈಲಿದ್ದ ಸೈಡ್ ಬ್ಯಾಗಂದ ತೆಗ್ದ್ ಅದರ ಒತ್ತಿ ಪದ್ಯ ಕೇಳಿಕಂಡ್ ಕುದ್ದೆ. ಬಸ್ ಮಡಿಕೇರಿಗೆ ತಲ್‌ಪಿಕಾಕನ ನಂಗೆ ಸೀಟ್ ಸಿಕ್ತ್. ನನ್ನ ಹಕ್ಕಲೆ ಒಂದು ದಂಪತಿ, ಕೂಸು ಕುದ್ದಿದ್ದೊ. ದಢೂತಿಗ ಯಾವುದೋ ನಂಗೆ ಅರ್ಥ ಆಗದ ಭಾಷೆಲಿ ಮಾತಾಡ್ತಿದ್ದೊ. ಕುಶಾಲನಗರ ತಲ್ಪಿತ್. ಡ್ರೈವರ್ ಕಾಫಿಗೇಂತ ಬಸ್ಸ್‌ನ ನಿಲ್ಸಿತ್. ಹೆಚ್ಚಾಗಿ ನಾ ಒಬ್ಬಳೇ ಅತ್ತಂದಿತ್ತ ಓಡ್ಯಾಡಿಕಂಡಿರೂದ್ರಿಂದ ಹೊಟ್ಟೆಗೆ ತೊಂದರೆ ಮಾಡದೆ ಊಟ ತಿಂಡಿ ಅಂತ ಮಾಡಿಕೆ ಇಳ್ದನೆ. ಇಲ್ಲಾಂತಾದರೆ ಗ್ಯಾಸ್ಟ್ರಿಕ್ ಆಗಿ ಆರೋಗ್ಯ ಹಾಳಾದೇಂತ ನಂಗೆ ಚೆಂದ ಗೊತ್ತುಟು. ಅಂದ್ ಹಾಂಗೆ ಬ್ಯಾಗ್‌ನ ಬದಿಲಿ ಇಸಿ, ಸೀಟ್ ಮೇಲೆ ಪುಸ್ತಕ ಹಾಕಿ ಕಾಫಿ ಕುಡಿಯಕೆ ಇಳ್ದೆ. ಸಾಮಾನ್ಯವಾಗಿ ಬಸ್ಸ್‌ಲಿ ಬಾಕನ ಹೋಕನ ನಾ ಯಾವ ಅಪರಿಚಿತರ ಹಕ್ಕಲೆ ಮಾತಾಡಿಕೆ ಹೋದ್ಲೆ. ಅವಾಗಿ ಮಾತಾಡ್ಸಿರೆ ಮಾತಾಡ್ನೆ ಅಷ್ಟೆ. ಹಂಗೆ ಯಾರಿಗೂ ಹೇಳದೆ ಸೀಟ್ ಮೇಲೆ ಬ್ಯಾಗ್ ಇಸಿ ಕಾಫಿಗೇಂತ ಇಳ್ದೆ. ತಿರ್ಗಿ ಬನ್ನೆ......... ನನ್ನ ಬ್ಯಾಗ್ ಅಲ್ಲಿಲ್ಲೆ. ನಂಗೆ ಒಮ್ಮೆ ಎದೆ "ಧಸಕ್" ಅಂತಾತ್. ಆದರೂ ರಶ್‌ಲಿ ಯಾರಾದರು ಮುಂದೆ ತಳ್ಳಿಳೋ ಏನೋ "ಅಂತ ಮುಂದೆ ಹೋಗಿ ನೋಡ್ದೆ. ಅಂದ್ ಕುಶಾಲ್‌ನಗರ ಸಂತೆ ಬೇರೆ! ಅಲ್ಲೂ ರಶ್‌ತೇಳ್ರೆ ರಶ್. ನನ್ನ ಸೀಟ್ ಮೇಲೆ ಪುಸ್ತಕ ಇಸ್ಸಿದ್ ಅದೂ ಇಲ್ಲೆ. ನನ್ನ ಸೀಟ್‌ಲಿ



ಯಾರೋ ಕುದಿದ್ರೊ. ಅವನನ್ನೇ ಕೇಳ್ದೆ, ಇಲ್ಲಿ ಸೀಟ್ ಇಸಿದೆ, ಇದ್ ನನ್ನ ಜಾಗ, ಇಲ್ಲೇ ಒಂದು ಬ್ಯಾಗ್ ಕೂಡಾ ಇಸ್ಸಿದ್ದೆ , ಅದರ ನೋಡ್ಯಳರಾಂತ ಕೇಳ್ದೆ. ಅಂವ ಗೊತ್ಲೆ ಅಂತೇಳ್ತ್. ನನ್ನ ಜೀವ ಮಾನಲೇ ಇದುವರೆಗೆ ಕಳ್‌ಕಂಡದ್ದ್ ಅಂತಾಗದೇ ಇದ್ದದ್ ಇಂದ್ ನಂಗೆ ಅನುಭವಕ್ಕೆ ಬಂದದ್ಯೇಂತ ಗ್ಯಾರಂಟಿ ಆತ್. ಸೀದಾ ಹೋಗಿ ಕಂಡಕ್ಟರ್‌ಗೆ ಹೇಳ್ದೆ. ಅಂವ ಹೊರಟಿದ್ದ ಬಸ್ಸ್‌ನ ನಿಲ್ಸಿತ್. ಅಷ್ಟರಲ್ಲೇ ಬಸ್ಸ್‌ಲಿ ಇದ್ದವ್‌ಕೆಲ್ಲಾ ವಿಷಯ ತಿಳ್ತ್. ನನ್ನ ಅಸಹಾಯಕ ಸ್ಥಿತಿನ ನೋಡಿ ಡ್ರೈವರ್ ನನ್ನೊಟ್ಟಿಗೆ ಇಳ್ತ್. ಒಟ್ಟಿಗೆ ಡೈರೆಕ್ಟ್ ಸೀಟ್‌ನ ಕೆಲವು ಮಂದಿ ಇಳ್ಸ್ ಕ್ಯಾಂಟೀನ್, ಟ್ಯಾಲೇಟ್, ಪತ್ರಿಕೆ ಅಂಗಡಿ, ಅತ್ತಸುತ್ತಾ ಮುತ್ತಾ ಎಲ್ಲಾ ನೋಡ್ರೊ. ಎಲ್ಲೂ ನನ್ನ ಬ್ಯಾಗ್ ಕಂಡತ್ಲೆ. ಎಂಥ ಮಾಡ್ತು? ನನ್ನ ದುಃಖನ ಅದುಮಿ ಹಿಡ್‌ಕಂಡೆ. ಡ್ರೈವರ್ ಏನೂ ಮಾಡುದು ಅಂತ ಕೇಳ್ಕನ ಪೋಯಿಂತ ಧೈರ್ಯಲಿ ಹೇಳ್ದೆ. ಬಸ್ ಹೊರಟತ್. ರಾತ್ರಿ 8.30 ಕ್ಕೆ ಮೈಸೂರ್‌ಗೆ ತಲುಪಿತ್. ರೂಂಗೆ ಬಂದವಳೇ. ದುಃಖ ತಡ್ಯಕಾಗದೇ ಗೋಳೋ ಅಂತ ಮರ್‌ಟೆ. ಸಮಾಧಾನ ಆತ್ಲೆ. ರೂಂಲೇ ಆಚೀಚೆ ಓಡಾಡ್ದೆ...... ಪದ್ಯ ಹಾಕಿ ಕೇಳ್ದೆ...... ಆಕಾಶ ನೋಡ್ದೆ, ಟಿ.ವಿ. ಹಾಕಿದೆ ಸಮಾಧಾನ ಆತ್ಲೆ. ಊಟ ಮಾಡಿಕೇ ಆತ್ಲೆ, ನಿದ್ದೆಯಂತೂ ಕಣ್ಣಕ್ಕಲೇ ಸುಳ್‌ತ್ಲೆ. ಸಂಕಟನ ಏನೂ ಮಾಡ್ರು ಕಂಟ್ರೋಲ್ ಮಾಡಿಕೆ ಆತ್ಲೆ. ಯಾಕೇಂತೇಳ್ರೆ. ಆ ಮೊಮೆಂಟನ ನನ್ನ ಪ್ರತಿಭೆಗೆ ಪ್ರಾಮಾಣಿಕ ಪ್ರಯತ್ನಕ್ಕೆ ಸಿಕ್ಕಿದ ಗೌರವ. ಅದರ ನಾ ತುಂಬಾ ಪ್ರೀತಿಸ್ತಿದ್ದೆ. ಆದರೇ ಅದೇ ನನ್ನಂದ ದೂರ ಆಗಿ ಹೋತಲ್ಲಾಂತ. ನನ್ನ ವ್ಯಕ್ತಿತ್ವದ ಅಮೂಲ್ಯ ಭಾಗವನ್ನೇ ಕಳ್‌ಕಂಡವಳ ಹಾಂಗೆ. ಆಗಿ ಬುಟ್ಟೆ. ನಂಗೆ ನಾನೇ ಎಷ್ಟು ಸಮಾಧಾನ ಹೇಳಿಕಂಡರೂ ತಡ್‌ಕಣಿಕೆ ಆತ್ಲೆ. ಅದರ ನೆನಪ್ಲೇ ದಿನ ನೊಂದ್‌ಕಂಡ್ ಇರ್‌ಕನ ಮತ್ತೆ ಅದೇ ಮೆಡಲ್‌ಗ ನನ್ನ ಕಣ್ಣ್ ಮುಂದೆ ಬಂದ್ ಮಾತಾಡ್ದಂಗೆ ಆತ್. ಅವ್ " ನೀ ನನ್ನ ಇಷ್ಟು ಪ್ರೀತಿಸ್ತಾ ಇದ್ದಾಂತ ನಂಗೆ ಗೊತ್ತಿತ್ಲೆ. ನಿನ್ನ ಸಂಕಟನ ನನ್ನ ಕಣ್ಣಲಿ ನೋಡಿಕೆ ಆಗ್ತಿಲ್ಲೆ. ನಂಗೆ ನೀ ಹೊಸ ಬಟ್ಟೆಗಳ ಹಾಕ್ತಿತ್ಲೆ........ ನನ್ನ ಸ್ನಾನ ಮಾಡ್‌ಸ್ತಿತ್ಲೆಂತ ಬೇಸರ ಆದ್ ನಿಜ. ಅದ್ಕೆ ನಿಂಗೆ ಬೈದದ್ದು ನಿಜ. ಆದರೆ ಅದ್ ನಮ್ಮ ಆತ್ಮೀಯ ಸಂಬಂಧಕ್ಕೆ ಕುಂದು ತಾದೂಂತ ನಾ ಯೋಚಿಸಿತ್ಲೆ. ನಂಗೂ ನೀ ಬೇಕೂ, ಆದ್ರಿಂದ ಒಂದ್ ಮಾತ್ ಹೇಳ್ನೆ. ನನ್ನ ಹೊತ್ತ್‌ಕಂಡ್ ಹೋದಂವ ಬಾರಿ ಪ್ರವೀಣ. ನೀ ಸಾರ್ವಜನಿಕವಾಗಿ ಒಂದು ಕಾಗ್ದ ಬರ್ದ್ ಪತ್ರಿಕೆಲಿ ಹಾಕ್. ಎಷ್ಟಾದರೂ ಅವ ಕಳ್ಳ ಪ್ರವೀಣ ಆದ್ರಂದ ಎಲ್ಲಿ ಏನು ಕಳ್ಳತನ ಆವುಟುತ ಓದದೆ ಇರಿಕಿಲೆ. ಆಗಾಲಾದರೂ ಅವಂಗೆ ಕರುಣೆ ಬಂದ್ ನನ್ನ ನಿನ್ನ ಒಟ್ಟಿಗೆ ಸೇರಿಸಿಕೂ ಸಾಕ್. ಆದರೇ ನನ್ನ ಹಣೆಬರಹ ಹೆಂಗುಟ್ಟೋ ನಂಗೊತ್ಲೆ. ನೀ ಬರ್ದ ಪತ್ರ ಪ್ರಿಂಟ್ ಆಕಾಕನ. ನಾ ಬದ್‌ಕಿದ್ದನೆ, ಸತ್ತಿದ್ದನೆ ಅಂತ ನಂಗೆ ಗೊತ್‌ಲೆ. ಆದಷ್ಟು ಬೇಗ ನಮ್ಮ ಭೇಟಿ ಆಗಲಿಂತ ದೇವರಕ್ಕಲೆ ಕೇಳಿಕಂಡನೇಂತ ಹೇಳ್ತ್. ನಂಗೂ ಸರೀಂತ ಕಂಡ್ ಕಾಗ್ದ ಬರಿಯಕೆ ಸುರು ಮಾಡ್ದೆ.

ಗೌರವಾದರಣೀಯನಾದ ಕಳ್ಳ ಪ್ರವೀಣಂಗೆ,

ಇತ್ತೀಚೆಗಷ್ಟೆ ನಿನ್ನ ಕೈ ಚಳಕಂದ ನಾ ನನ್ನ ಬ್ಯಾಗ್‌ನ ಕಳ್ಕಂಡ್ ಮಾತಾಡಿಕ್ಕೆ ಆಗದೆ ಸಂಕಟಪಡ್ತಾ ಇರುವವಳ ಉದ್ದಾಂಡ ನಮಸ್ಕಾರ.

ನೀ ಒಬ್ಬ ವೃತ್ತಿ ನಿರತ ಕಳ್ಳನಾ, ಹವ್ಯಾಸಿ ಕಳ್ಳನಾ, ನಿನ್ನ ಎಡ್ರಾಸ್ ಒಂದೂ ನಂಗೆ ಗೊತ್ಲೆ. ಏಕೇಂತೇಳ್ರೆ ಇದೇ ರೀತಿ ಮಡಿಕೇರಿ ಬೆಂಗಳೂರು ಬಸ್ಸ್‌ಲಿ ಏನೂ ಗೊತ್ತಿಲ್ಲದವರಂಗೆ ನನ್ನಂತವರ ಬ್ಯಾಗ್, ಪರ್ಸ್ - ಸರಗಳ ಲಪಟಾಯಿಸ್‌ತ್ತಿದ್ದರೂ ಯಾರ ಕಣ್ಣಿಗೂ ನೀನ್ ಕಾಣಿಸಿಕಂಡತ್ಲೆ. ನಿನ್ನ ಕಾಣುವ ಬಗೆ ಅಂತೂ ನಂಗೆ ಗೊತ್ತಾಗದೇ ನನ್ನ ಸಂಕಟನ ಬೇರೆ ಯಾರಲ್ಲೂ ಹೇಳಿಕಣ್‌ದಕ್ಕಿಂತಲೂ ನಿನ್ನಕ್ಕಲೇ ಹೇಳಿಕಂಡರೆ ಹೇಂಗೆ ಅಂತೇಳುವ ಯೋಚನೆಲಿ ಈ ಕಾಗ್ದ ಬರಿತಾಒಳೆ.

ಎಲ್ಯೆ ಚಾಂಪ ಕಳ್ಳ ನನ್ಮಗನೇ, ಕಳ್ದ ಶನಿವಾರ, ಈ ನನ್ನ ಕೈ ಚಳಕಂದ ನನ್ನ ಬ್ಯಾಗನ ಕದ್ದೋಳ. ಅದರ್ಲಿ ದುಡ್ಡ್ ಇತ್ತ್‌ಲೆ ಅಲ್ಲ ಮಾರಾಯ. ನನ್ನ ಒಂದೆರಡ್ ಬಟ್ಟೆಗ, ಸ್ವಲ್ಪ ಸ್ವೀಟ್ಸ್‌ಗ, ಒಂದೆರಡ್ ಬ್ರೆಷ್, ಪೇಯಿಂಟಿಂಗ್ ಟ್ಯೂಬ್‌ಗ - ಮತ್ತೆ ನನ್ನ ಮೆಡಲ್ ಪ್ರೈಸ್‌ಗ ಇತ್ತಷ್ಟೆ. ನಿಂಗೆ ಬೇಕಾಗುವಂತದ್ದ್ ಏನೂ ಇತ್ಲೆ ಅದರ್ಲಿ. ನನ್ನ ಬಟ್ಟೆಗಳ ನಿಂಗೆ ಹಾಕಿಕೆ ಆದಾ ಹೇಳ್...... ನಿನಾಲ್ ನಾನ್‌ವೆಜ್ ಬಾಟ್‌ಕಾಯಿ ಮಾಡುವ ನಿಂಗೆ ಈ ಪುಳಿಚಾರ್ ಸ್ವೀಟ್ಸ್ ಯಾಕೆ ಹೇಳ್? ಚಿತ್ರ ಬುಡ್ಸ್‌ದು ಅಂತೂ ನಿನ್ನ ಕಾಯಕನೇ ಅಲ್ಲಾ. ಮತ್ಯಾಕೆ ಆ ಪೇಂಟ್ ಬ್ರಶ್‌ಗ.........? ಮೊಮೆಂಟೋ ಪ್ರೈಸಗ............... ಹೌದಪ್ಪ ಅವೆಲ್ಲಾ ಮೆಟಲ್‌ದೇನೋ ಸರಿ. ಆದರೆ ಅದರ್ಲಿ ಎಲ್ಲಾದರಲ್ಲೂ ನನ್ನ ಹೆಸರ್, ವಿಳಾಸ, ಕೊಟ್ಟವರ ಹೆಸರೂ ಉಟ್ಟಲ್ಲಾ. ನೀ ಅದರ ಅಂಗಡಿಗೆ ತಕಂಡ್ ಹೋಗಿ ಎಷ್ಟು ಸಂಪಾದನೆ ಮಾಡುವ ಅಂತೇಳುವ ಪ್ರಶ್ನೆಂದಲೂ ಕೊಟ್ಟ ಅಂಗಡಿಯವು ಅದರ್ಲಿ ಇದ್ದ ಹೆಸರ್ ನೋಡಿ ಇದ್ ಕಳ್ಳ ಮಾಲಾಂತ ಗೊತ್ತಾಗಿ ಮಾವನಕ್ಕಲೆ ಕಳ್ಸಿರೆ ನಿನ್ನ ವೃತ್ತಿಗೇ. ನೀ ಗುಡ್ ಬೈ ಹೇಳಿ ಕಂಬಿ ಎಣ್ಸಿಕಂಡ್ ಕುದ್ರಿಕಾದು. ಅಲ್ಲಾ ನೀ ಬುದ್ಧಿವಂತಾಂತ ನಂಗೆ ಗೊತ್ತುಟು. ಲೋ ನಿಂಗೆ ಯಾಕೆ ಮಾರಾಯ ನನ್ನ ಬ್ಯಾಗ್. ನಿಂಗೆ ಬೇಕಾದ ದುಡ್ಡ್ ಖಂಡಿತವಾಗಿಯೂ ಅದರ್ಲಿ ಇಲ್ಲೆ. ನೀ ಬೇಕಾದರೆ ನಂಗೆ



ದುಡ್ಡ್ ಕೊಡೂಂತ ಕೇಳ್ ಬ್ಯಾಗ್‌ಲಿದ್ದ ಬೇರೆ ವಸ್ತುಗಳ ಬೇಕಾದರೆ ತಕಾ. ಆದರೆ ನನ್ನ ಮೊಮೆಂಟಗಳ ಹಿಂದಿರುಗಸಪ್ಪ. ಯಾಕೆ ಗೊತ್ತಾ ? ಅದರ್ಲಿ ನನ್ನ ವ್ಯಕ್ತಿತ್ವ ಉಟ್ಟು. ನನ್ನ ಜೀವ ಉಟ್ಟು. ಎಲ್ಲಾ ನನ್ನ ಸ್ವಂತ ಪರಿಶ್ರಮದ ಪ್ರಾಮಾಣಿಕದ ಹಟಪಟ್ಟ್ ಗೆದ್ದ ಹತ್ತ್ ವರ್ಷಲಿ ಸಾಧಿಸಿದ ಹೆಮ್ಮೆಯ ಸೊತ್ತುಗ- ಪ್ಲೀಸ್ ಕೊಟ್ಟಾ ?

ಇದರೊಟ್ಟಿಗೆ ನನ್ನದೊಂದು ಕನಸೂ ಇತ್ತ್. ನಾ ಮದ್ವೆ ಆಗುವವಂಗೆ ಇದ್ರ ತೋರ್ಸಿ ಗತ್ತ್‌ಲೆ ಗಂಡನ ಮನೇಲಿ ಶೋಕೇಸ್‌ಲಿ ಇಸಕೂಂತ ಕನಸ್ ಕಂಡಿದ್ದೆ. ಆದರೆ ನನಸೂ ಮಾಡಿಕಣಿಕಾದರೂ ಬುಟ್ಟಾ ?

ನಿಂಗೆ ಒಂದ್ ಹಿತವಚನ ಹೇಳಕೂಂತ ಹಟ ನನ್ನದ್. ನೀ ಹಿಡ್ದಿರುವ ವೃತ್ತಿ ಕೆಲಸದ ಬಗ್ಗೆ ಬಹಳ ಕೆಟ್ಟ ಅಭಿಪ್ರಾಯವುಟ್ಟು. ನನ್ನಂತ ಪಾಪದವರ ಬ್ಯಾಗ್ ಕದ್ದ್ ಸಿಕ್ಕಿ ಬಿದ್ದರೆ ನಿನ್ನ ರಕ್ಷಣೆಗೆಂತ ಯಾರ್ ಬಾಕಿಲೆ. ಆಗ ನೀನ್ ಎಲ್ಲರ ಮುಂದೆ ಒದೆ ತಿಂದಿಯಾ ನೋಡ್. ಹಾಂಗಿರ್‌ಕನ ಮಾರ್ಯದೆಯಾಗಿ ನಿನ್ನ ವೃತ್ತಿನ ಮುಂದುವರೆಸಿಕಂಡ್ ಹೋಗ್? ನಿನ್ನ ವೃತ್ತಿಯದೇ ಹಲವಾರು ಶಾಖೆಗ ಉಟ್ಟು. ಒಬ್ಬನ ಕೊಂದಾಕನ ಅವ ಕೊಲೆಗಾರ ಅಂತನಿಸಿದೆಕಂಡದೆ. ತುಂಬಾ ಜನರ ಕೊಂದರೆ ಅಂವ ಯೋಧ ಅಂತ ಅನಿಸಿಕಂಡದೆ. "ಸೈಟ್ ಕೊಡ್ಸಿನೆ ಅಂತಾ ಬೋರ್ಡ್ ಹಾಕಿಕ. ಜನ ಕ್ಯೂವ್ ನಿಂತವೆ. ದುಡ್ಡು ಹರ್ಪ್ ಬಂದದೆ. ಮನೆ ಬೀಳ್ಸಿ ಪ್ಲಾಟಕಟ್ಸ್. ವೀಸಾ ಕೊಡುವ ಆಫೀಸ್ ತೆಗಿಬೇಕಾ ಒಂದ ಎರಡ್........ ಬೇಕಾದ್ದ್ ಮಾಡ್.

ನೀ ದುಡ್ಡು ಇರ್‌ವ್ರಂತ ಆ ಮೊಮೆಂಟನ ಕದ್ದಿದ್ದರೆ ನಿಂಗರ್‌ಲಿ ಎಂತದ್ದೂ ಸಿಕ್ಕಿತ್ಲೆ ಖಂಡಿತಾ. ಮಾರಾಯ ನನ್ನಂಥ ಪ್ರಾಮಾಣಿಕ ವ್ಯಕ್ತಿಗಳ ಜುಜುಬಿ ಮೊಮೆಂಟಗಳ ಕದ್ದ್ ಎಷ್ಟ್ ದಿನಾಂತ ಬದುಕುವಾನಿ....? ದಯವಿಟ್ಟು ನನ್ನ ಮೊಮೆಂಟೋ ಬ್ಯಾಗ್‌ನ ಕಳ್ಸಿಕೊಟ್ಟಿಯನಾ

*ಇಂತು*

*ಬ್ಯಾಗ್ ಕಳ್‌ಕಂಡ ಪುಣ್ಯಾತ್ಮ ಗಿತ್ತಿ.*

ಈ ಕಾಗದ ಬರ್ದ್ ವರ್ಷ ನಾಲ್ಕು ಕಳ್ದರೂ ಇನ್ನು ನನ್ನ ಮೊಮೆಂಟೋ ಬ್ಯಾಗ್ ನನ್ನ ತಲುಪಿತ್ಲೆ....... ಅದ್ ನನ್ನ ಜೀವನದ ಒಂದ್ ಭಾಗವೇ ಆಗಿರ್‌ದರ್‌ಂದ ಮತ್ತೆ ಮತ್ತೆ ಅದರ ನಿರೀಕ್ಷೆಲಿ................

ಗೀತಾ ಮೋಂಟಡ್ಕ









ಕೊಡಗು ಗೌಡ
ಸಾಂಪ್ರದಾಯದ
ಉಡುಪಿನಲ್ಲಿ ನಮ್ಮ
ಯುವಕ



ಕೊಡಗು ಗೌಡ
ಸಾಂಪ್ರದಾಯದ
ಉಡುಪಿನಲ್ಲಿ ನಮ್ಮ
ಯುವತಿ






"ಕೊಡಗು ಸಂಗಾತಿ." ಪಾಕ್ಷಿಕ ಪತ್ರಿಕೆಯ ಕಾರ್ಯ ಶ್ಲಾಘನೀಯ.
ದಿನಾಂಕ 12-4-1998 ರಲ್ಲಿ ಮೈಸೂರಿನ ಕಲಾಮಂದಿರದಲ್ಲಿ ನಡೆಯಲಿರುವ ಚರಿತ್ರಾರ್ಹ ಕಾರ್ಯಕ್ರಮ ನಿರೂಪಿಸುವ ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಮೈಸೂರು, ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲಾ ಗೌಡ ಮಹಿಳಾ ಒಕ್ಕೂಟ, ಹಾಗೂ "ಕೊಡಗು ಸಂಗಾತಿ" ಪಾಕ್ಷಿಕ ಪತ್ರಿಕೆಯವರಿಗೆ

# ಶುಭಾಶಯಗಳು

ಸ್ಥಾಪನೆ **1908**

**ಕೊಡಗು ಗೌಡ ವಿದ್ಯಾ ಸಂಘ (ರಿ)**
**ಸುಬೇದಾರ್ ಅಪ್ಪಯ್ಯಗೌಡ ರಸ್ತೆ, ಮಡಿಕೇರಿ ✆ (08272) 29906**

-ಹಾಲಿ ಕಾರ್ಯಕಾರಿ ಮಂಡಳಿ-

| | | |
|---|---|---|
| ಅಧ್ಯಕ್ಷರು | :- | ಶ್ರೀ ಕುಯ್ಯಮುಡಿ ಕಾಳಪ್ಪ ಪೂರ್ಣಯ್ಯನವರು |
| ಉಪಾಧ್ಯಕ್ಷರು | :- | ಶ್ರೀ ಪಂಜಿಪಳ್ಳ ಯಂ. ವೆಂಕಪ್ಪನವರು |
| ಗೌ. ಕಾರ್ಯದರ್ಶಿ | :- | ಶ್ರೀ ಕೋಳುಮುಡಿಯನ ರಾಮಯ್ಯ ಅನಂತ ಕುಮಾರ್ |
| ಖಜಾಂಚಿ | :- | ಶ್ರೀಮತಿ ಕೂಡಕಂಡಿರ ಕಾವೇರಮ್ಮ ಸೋಮಣ್ಣನವರು |
| ಸಲಹೆಗಾರರು | :- | ಶ್ರೀ ಪಾಡಿಚೆಟ್ಟೀರ ಎಂ. ಉತ್ತಪ್ಪನವರು |
| ಆಡಿಟರ್ | :- | ಶ್ರೀ ಮೂಟೇರ ಜಿ. ಚಂಗಪ್ಪನವರು |
| ನಿರ್ದೇಶಕರು | :- | ಶ್ರೀ ಸೂರ್ತಲೆ ಆರ್. ಸೋಮಣ್ಣನವರು |
| ನಿರ್ದೇಶಕರು | :- | ಶ್ರೀ ಮೊಟ್ಟೇರ ಎಂ. ಜಗದೀಶ್ ರವರು |
| ನಿರ್ದೇಶಕರು | :- | ಶ್ರೀ ಕೋಡಿ ಎಸ್. ನಂಜುಂಡನವರು |
| ನಿರ್ದೇಶಕರು | :- | ಶ್ರೀ ಮಂಡೀರ ಎಸ್. ದೇವಯ್ಯನವರು |
| ನಿರ್ದೇಶಕರು | :- | ಶ್ರೀ ಚಿಯಂಡೀರ ಎಂ. ಯಾದವನವರು |
| ನಿರ್ದೇಶಕರು | :- | ಶ್ರೀ ಬಾರಿಕೆ. ಎಂ. ಪೂಣಚ್ಚನವರು |
| ನಿರ್ದೇಶಕರು | :- | ಶ್ರೀ ಪಟ್ಟಡ ಎಂ. ಪ್ರಭಾಕರನವರು |
| ನಿರ್ದೇಶಕರು | :- | ಶ್ರೀ ಮತಿ ಪಂಜಿಪಳ್ಳ, ಇಂದ್ರಾಕ್ಷಿ ವೆಂಕಪ್ಪನವರು |
| ನಿರ್ದೇಶಕರು | :- | ಶ್ರೀ ಮತಿ ಯಾಲದಾಳು ಸಾವಿತ್ರಿಯವರು |

ಮ್ಯಾನೇಜರ್:- ಶ್ರೀ ಚೆಟ್ಟಿಮಾಡ ಪಿ. ರಘುಪತಿನವರು




ನಮ್ಮ ಗೌಡ ಜನಾಂಗದ ಪ್ರಪ್ರಥಮ ಪಾಕ್ಷಿಕ ಪತ್ರಿಕೆ
'ಕೊಡಗು ಸಂಗಾತಿ' ಯ
ಪ್ರಥಮ ವಾರ್ಷಿಕೋತ್ಸವಕ್ಕೆ ನಮ್ಮ

"ಹಾರ್ಧಿಕ ಶುಭಾಶಯಗಳು"

ಯಿಂದ

ಶ್ರೀ ಪೈಕೇರ ಅಪ್ಪಯ್ಯ ಅನಂತರಾವ್
ಕಾಫಿ ಫ್ಲಾಂಟರ್
ಮತ್ತು
ಶ್ರೀಮತಿ ಚಿತ್ರಲೇಖ ಅನಂತರಾವ್
ಸಂಜಯ್ ಅನಂತರಾವ್
ಸ್ಮಾರಕ್ ಅನಂತರಾವ್

ಅಂಚೆ ಪೆಟ್ಟಿಗೆ ಸಂಖ್ಯೆ - 25
ಪಾಲಿಬೆಟ್ಟ, ಕೊಡಗು ಜಿಲ್ಲೆ - 571 215
ದೂರವಾಣಿ : 082 4/51371

ಜನಾಂಗದ ಹಿತದೃಷ್ಟಿಯಿಂದ ಮುನ್ನುಗ್ಗಿ ಪತ್ರಿಕೆ
ತಂದಿದ್ದೀರಿ, ನಿಮ್ಮ ಪ್ರಥಮ ವರ್ಷದ
ವಾರ್ಷಿಕೋತ್ಸವಕ್ಕೆ ನಮ್ಮ

# ಶುಭಾಶಯಗಳು

ಶ್ರೀ ಬೈಮನ ರಾಮಪ್ಪ ಪೊನ್ನಪ್ಪ
ಮರಗೋಡು ಗೌಡ ಸಮಾಜದ ಅಧ್ಯಕ್ಷರು,
ಮತ್ತು
ಶ್ರೀ ವಿಜಯಕುಮಾರ ಪೊನ್ನಪ್ಪ
ಶ್ರೀಮತಿ ವನಜಾಕ್ಷಿ ವಿಜಯಕುಮಾರ್
ಸುಮಂತ ವಿಜಯಕುಮಾರ್
ಸುದೇಶ ವಿಜಯಕುಮಾರ್
ಶ್ರೀ ಹೇಮಂತಕುಮಾರ್ ಪೊನ್ನಪ್ಪ
ಶ್ರೀಮತಿ ಶಾಂತಿ ಹೇಮಂತ್‌ಕುಮಾರ್
ಸರ್ವಿನ್ ಹೇಮಂತಕುಮಾರ್
ಸಿರಿನ್ ಹೇಮಂತಕುಮಾರ್
ಶ್ರೀ ನರೇಶ್‌ಕುಮಾರ್ ಪೊನ್ನಪ್ಪ M.B.A. (USA)
ಶ್ರೀ ಜಯಶ್ರೀ ನರೇಶ್‌ಕುಮಾರ್

ಮೊದಲನೇ ವಾರ್ಷಿಕೋತ್ಸವದ ಈ ಶುಭ ಸಂದರ್ಭದಲ್ಲಿ
"ಕೊಡಗು ಸಂಗಾತಿಯ" ಬಳಗಕ್ಕೆ ಮತ್ತು
ಸಮಸ್ತ ಓದುಗರ ಬಳಗಕ್ಕೆ

**ಶುಭಕಾಮನೆಗಳು**



**ಶ್ರೀ ತುಮ್ಮಜಿರ ವೆಂಕಟೇಶ್ (ಗಣೇಶ್),**

*ಅಧ್ಯಕ್ಷರು.*

*ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ, ಮಡಿಕೇರಿ*

**ಮತ್ತು**

**ಶ್ರೀಮತಿ ನಳಿನಿ ವೆಂಕಟೇಶ್**

ಮಕ್ಕಳಾದ **ಚಂದನ್, ಸುವಿನ್**

ಬಿಳಿಗೇರಿ ಗ್ರಾಮ ಮತ್ತು ಅಂಚೆ
ಮಡಿಕೇರಿ, ಕೊಡಗು
✆ (08272) 31222



ನಿಮ್ಮ ಅರೆಭಾಷಿಕ ಸಾಂಸ್ಕೃತಿಕ ಸಮಿತಿಯ ಕಾರ್ಯಕ್ರಮಕ್ಕೆ

# ಹಾರ್ದಿಕ

# ಶುಭಾಶಯಗಳು



**ಡಾ|| ಮಹದೇವ್,** ಯಂ. ಎಸ್. ಆರ್ಥೋ
ನಂ. 2989, ಎರಡನೇ ಮೇನ್
ವಿ.ವಿ. ಮೊಹಲ್ಲಾ
ಮೈಸೂರು - 570 002
✆ 510783



ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಮೈಸೂರು

ಮಹಿಳಾ ಒಕ್ಕೂಟ ಮೈಸೂರು ಮತ್ತು ಕೊಡಗು ಸಂಗಾತಿಗೆ

# ಶುಭಾಶಯಗಳು

**ಶ್ರೀ ಎಸ್. ಸೋಮಪ್ಪ**
**ಶ್ರೀಮತಿ ಕಸ್ತೂರಿ ಸೋಮಪ್ಪ**
ಮಕ್ಕಳು : **ಗೌತಮ್ ಸೋಮಪ್ಪ**
**ನೀತನ್ ಸೋಮಪ್ಪ**

ಕಸ್ತೂರಿ ನಿಲಯ
ಎಂ. ಐ.ಜಿ. -21
2ನೇ ಹಂತ,
ಬನ್ನಿಮಂಟಪ ಬಡಾವಣೆ
ಮೈಸೂರು







ಜನಾಂಗದ ಅರೆಭಾಷೆ ಕಾರ್ಯಕ್ರಮ,

ಮಹಿಳಾ ಒಕ್ಕೂಟ ಹಾಗೂ ಕೊಡಗು ಸಂಗಾತಿಗೆ ನಮ್ಮ

## ಶುಭಾಶಯಗಳು

| | |
|---|---|
| ತಡಿಯಪ್ಪನ : | ಪಿ.ಬಸಪ್ಪ |
| " | ರಾಣಿ ಬಸಪ್ಪ |
| ಮಗ | ತೇಜ್‌ಕುಮಾರ್ |
| ಸೊಸೆ | ಆಶಾ ತೇಜ್‌ಕುಮಾರ್ |
| ಮಗಳು | ಪ್ರೀತು |
| ಅಳಿಯ | ಪೊನ್ನೇಟಿ ನಂದ |

ನಿವೃತ್ತ ಪೋಲಿಸ್ ಇನ್ಸ್‌ಪೆಕ್ಟರ್,
ವಿಜಯಶ್ರೀಪುರ,
ಪ್ರೀಮಿಯರ್ ಸ್ಟುಡಿಯೋ ಮುಂಭಾಗ,
ಹುಣಸೂರು ರಸ್ತೆ, ಮೈಸೂರು

ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಮೈಸೂರು
ಗೌಡ ಮಹಿಳಾ ಒಕ್ಕೂಟ ಮೈಸೂರು ಹಾಗೂ
ಕೊಡಗು ಸಂಗಾತಿಯ ಬಳಗಕ್ಕೆ ನಮ್ಮ

# ಶುಭಾಶಯಗಳು

ಯಿಂದ

ಶ್ರೀ ಪಟ್ಟಡ ನಂಜುಂಡ ಜಯರಾಮ್
(ಕರ್ನಾಟಕ ಗೃಹಮಂಡಳಿ, ಮೈಸೂರು)
ಶ್ರೀಮತಿ ಪಟ್ಟಡ ಜಯರಾಮ್ ಪೂವಮ್ಮ
(ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ)

ಹಾಗೂ ಮಕ್ಕಳಾದ

ಕು॥ ದಿವ್ಯಶ್ರೀ
ಮಾ॥ ದೀಪಕ್
ಕು॥ ಉಷಾ

ವಿಳಾಸ : ಮನೆ ನಂ. 1691, 2ನೇ ಕ್ರಾಸ್, 6ನೇ ಮೇನ್, ವಾಟರ್ ಟ್ಯಾಂಕ್ ಹತ್ತಿರ
ವಿಜಯನಗರ 2ನೇ ಹಂತ, ಮೈಸೂರು - 570 017 ✆: 0821-514185

ಜನಾಂಗದ ಅರೆಭಾಷಾ ಕಾರ್ಯಕ್ರಮ, ಗೌಡ ಮಹಿಳಾ ಒಕ್ಕೂಟ ಮೈಸೂರು ಮತ್ತು ಕೊಡಗು ಸಂಗಾತಿಯ ವಾರ್ಷಿಕೋತ್ಸವಕ್ಕೆ ನಮ್ಮ

# ಶುಭಾಶಯಗಳು

ಚೆಟ್ಟಿಮಾಡ. ಕೆ. ಕಮಲ

ನಂ. 251
8ನೇ ಅಡ್ಡ ರಸ್ತೆ,
ಬಿ.ಯಂ.ಶ್ರೀ ನಗರ,
ಮೇಟಗಳ್ಳಿ, ಮೈಸೂರು




## ಜೀವ ವಿಮಾ ನಿಗಮದ ಪ್ರಥಮ
## ಕೋಟ್ಯಾಧಿಪತಿ ಏಜೆಂಟ್



ದೇವಂಗೋಡಿ ಕೆ. ಗಿರೀಶ್
ನಂ. 251, ಮಹದೇಶ್ವರ ಬಡಾವಣೆ
ಕುಂಬಾರಕೊಪ್ಪಲು
ಮೈಸೂರು - 570 016
✆ 516693 (0821)

ಮೈಸೂರಿನ ಕೆ.ಆರ್.ಎಸ್. ರಸ್ತೆಯಲ್ಲಿರುವ ಭಾರತೀಯ ಜೀವವಿಮಾ ನಿಗಮದ ಶಾಖೆ ನಂ. 1ರಲ್ಲಿ ಪ್ರತಿನಿಧಿ ಮತ್ತು ನಿಗಮದ ಡಿ.ಯಂ. ಕ್ಲಬ್ ಸದಸ್ಯರಾಗಿರುವ ಭಾಗಮಂಡಲ ದೇವಂಗೋಡಿ ಬಿ. ಕುಶಾಲಪ್ಪನವರ ಪ್ರಥಮ ಪುತ್ರ ಗಿರೀಶ್ ರವರು ಪ್ರಸಕ್ತ ಸಾಲಿನಲ್ಲಿ ಶಾಖೆಯ"ಪ್ರಥಮ ಕೋಟ್ಯಾಧಿಪತಿ ಏಜೆಂಟ್" ಕೀರ್ತೀಯನ್ನು ದಿನಾಂಕ21.3.98 ರಂದು ಅಲಂಕರಿಸಿಕೊಂಡಿದ್ದಾರೆ. ಕಳೆದ ಸಾಲಿನಲ್ಲಿಯೂ ಸಹ ಇವರು ಶಾಖೆಯಲ್ಲಿ "ದ್ವಿತೀಯ ಕೋಟ್ಯಾಧಿಪತಿ ಏಜೆಂಟ್" ಕೀರ್ತಿಯನ್ನು ಪಡೆದಿದ್ದರು. ಇದೀಗ ಶಾಖೆಯಲ್ಲಿ ಮೊದಲನೇ ಸ್ಥಾನದಲ್ಲಿದ್ದಾರೆ.

1991 ರ ಅಕ್ಟೋಬರ್ ತಿಂಗಳಲ್ಲಿ ಶಾಖೆಯ ಅಭಿವೃದ್ಧಿ ಅಧಿಕಾರಿ ಡಿ. ರಂಗಸ್ವಾಮಿಗೌಡರ ಮೂಲಕ ಏಜೆಂಟ್ ವೃತ್ತಿಯನ್ನು ಕೈಗೊಂಡ ಇವರು ಇಲ್ಲಿಯ ತನಕ 725 ಪಾಲಿಸಿದಾರರಿಗೆ 4.25 ಕೋಟಿ ರೂ.ಗಳ ವಿಮಾ ರಕ್ಷಣೆಯನ್ನು ಒದಗಿಸಿದ್ದಾರೆ.

ನಗರದ ಪ್ರಸಿದ್ಧ ಮೂಳೆ ಮತ್ತು ಕೀಲುಗಳ ತಜ್ಞ ವೈದ್ಯರಾಗಿರುವ ಶ್ರೀಮಾನ್ ಡಾ|| ಕೆ. ಮಹದೇವ್ ಮತ್ತು ಅವರ ಧರ್ಮಪತ್ನಿ ಬೋಜಕ್ಕಿ ಮಹದೇವ್‌ರವರ ಕೃಪಾಶ್ರಯದಿಂದ ಬೆಳೆದು ಬಂದ ಇವರು ತಮ್ಮ ಸಾಧನೆಗೆ ಎಲ್ಲಾ ರೀತಿಯಲ್ಲಿಯೂ ಕಾರಣರಾದ ತಮ್ಮ ಚಿಕ್ಕಮ್ಮನವರಾದ ಶ್ರೀಮತಿ ಭೋಜಕ್ಕಿ ಮಹದೇವ್ ಮತ್ತು ಇವರ ಅತ್ತೆ ಮಾವಂದಿರಾದ ಕೊಡಗನ ಚಂದ್ರಮ್ಮ ಮತ್ತು ರಾಮೇಗೌಡರನ್ನು ಮನಃಪೂರ್ವಕವಾಗಿ ಸ್ಮರಿಸಿ ಕೊಳ್ಳುತ್ತಿರುವ ಶ್ರೀಯುತರು ತಮ್ಮ ಎಲ್ಲಾ ಪಾಲಿಸಿದಾರರಿಗೆ, ಬಂಧು ಬಳಗದ ವರಿಗೆ ಹಾಗೂ ಸ್ನೇಹಿತರಿಗೆ ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಅರ್ಪಿಸುತ್ತಾ ತಮ್ಮ ಮುಂದಿನ ಗುರಿ ಅಭಿವೃದ್ಧಿ ಅಧಿಕಾರಿಯಾಗುವ ಸಾಧನೆಯತ್ತ ಹೆಚ್ಚು ಯಶಸ್ವಿಯಾಗಲೆಂದು ಕೊಡಗು ಸಂಗಾತಿ ಬಳಗ ಮೈಸೂರು ಶುಭ ಹಾರೈಸುತ್ತದೆ.

ಜನಾಂಗದ ಸಂಘಟನೆಗೆ ಮೂಲರಾದ ಗೌಡ ಮಹಿಳಾ ಸಂಘಟನೆ
ಹಾಗೂ ಅರೆಭಾಷಿಕ ಸಾಂಸ್ಕೃತಿಕ ಸಮಿತಿ ಮತ್ತು ಕೊಡಗು ಸಂಗಾತಿಗೆ
ನಾವು ಶುಭ ಹಾರೈಸುತ್ತೇವೆ.

ಯಿಂದ

ಶ್ರೀಮತಿ ಮತ್ತಾರಿ ಮೀನಾಕ್ಷಿ ಗಣಪತಿ
ಕು॥ ಪ್ರಶಾಂತ್
ಕು॥ ಸತೀಶ್
ಕು॥ ಸುನೀಲ್



ವಿಳಾಸ :
**ನಂ. 905/9A, 4ನೇ ಮುಖ್ಯ ರಸ್ತೆ,**
**1ನೇ ಅಡ್ಡ ರಸ್ತೆ, ವಿದ್ಯಾರಣ್ಯಪುರಂ**
**ಮೈಸೂರು - 08**
**✆ : 0821/481901**

ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಮೈಸೂರು,
ಕೊಡಗು ಮತ್ತು ದ.ಕ. ಜಿಲ್ಲಾ ಗೌಡ
ಮಹಿಳಾ ಸಂಘಟನೆ, ಮೈಸೂರು ಮತ್ತು
ಕೊಡಗು ಸಂಗಾತಿ ವಾರ್ಷಿಕ ಪತ್ರಿಕೆಗೆ

ನಮ್ಮ **ಶುಭಾಶಯಗಳು**



*ಯಿಂದ*

ಶ್ರೀ ಪಟ್ಟಡ ರಾಮಪ್ಪ ಸೋಮಣ್ಣ
ಶ್ರೀಮತಿ ಪದ್ಮ ಸೋಮಣ್ಣ
ಮಕ್ಕಳಾದ ನವೀನ್
ಕುಮಾರಿ ನೂತನ್



ಮನೆ ನಂ. 30, C ಬ್ಲಾಕ್
ಕೆ.ಎಸ್.ಆರ್. ಪಿ, ಜಾಕಿ ಕ್ವಾಟ್ರರ್ಸ್
ಮೈಸೂರು







# ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲಾ ಗೌಡ ಮಹಿಳಾ ಸಂಘಟನೆ ಮೈಸೂರು

-ಹಾಲಿ ಕಾರ್ಯಕಾರಿ ಮಂಡಳಿ-

| | | |
|---|---|---|
| ಅಧ್ಯಕ್ಷರು | : | ಕುಂಭಗೌಡನ, ಮುತ್ತಮ್ಮ ದೇವಯ್ಯ |
| ಉಪಾಧ್ಯಕ್ಷರು | : | ಕು|| ಧನು ಚೆರಿಯಮನೆ |
| ಕಾರ್ಯದರ್ಶಿ | : | ಕು|| ಗೀತಾ ಮೋಂಟಡ್ಕ |
| ಖಜಾಂಚಿ | : | ಕು|| ಓಡಿಯನ ಝಾನ್ಸಿ |
| ಸಹ ಕಾರ್ಯದರ್ಶಿ | : | ಚೆಟ್ಟಿಮಾಡ, ಲಕ್ಷ್ಮಿ ರಘುಪತಿ |
| ನಿರ್ದೇಶಕರು | : | ದಂಬೆಕೋಡಿ ಭಾಗೀರಥಿ |
| ನಿರ್ದೇಶಕರು | : | ಪಟ್ಟಡ ಶೀಲಾ ಪ್ರಭಾಕರ್ |
| ನಿರ್ದೇಶಕರು | : | ಕೂರನ ಚಂದ್ರಾವತಿ |
| ನಿರ್ದೇಶಕರು | : | ಬಾಳೆಡಿ ಲಕ್ಷ್ಮಿ ಉತ್ತಯ್ಯ |
| ನಿರ್ದೇಶಕರು | : | ಚೆರಿಯಮನೆ ಶಾರದ ರಾಮಚಂದ್ರ |
| ನಿರ್ದೇಶಕರು | : | ಮುಕ್ಕಾಟಿ ಮೀನಾಕ್ಷಿ ಗೋಪಾಲ |
| ನಿರ್ದೇಶಕರು | : | ಕಡ್ಯದ ಶ್ಯಾಮಲ ತಾರಣಯ್ಯ |
| ನಿರ್ದೇಶಕರು | : | ಕುಯ್ಯುಮುಡಿ ಲೀಲಾ ಮಾಚಯ್ಯ |
| ನಿರ್ದೇಶಕರು | : | ಹುದೇರಿ ಹೇಮಾವತಿ ಸೋಮಣ್ಣ |
| ನಿರ್ದೇಶಕರು | : | ನಾಟೋಳನ ಸೀತಮ್ಮ ಶ್ರೀಧರ |
| ನಿರ್ದೇಶಕರು | : | ಪಟ್ಟಡ ಪದ್ಮ ಸೋಮಣ್ಣ |

*ಉದ್ದೇಶ* : **ಗೌಡ ಮಹಿಳೆಯರ ಸಂಘಟನೆ ಮತ್ತು ಏಳಿಗೆ, ಐಕ್ಯತೆಗಾಗಿ ಶ್ರಮಿಸುವುದು.**



**ಕೊಡಗಿನ ಗೌಡ ಜನಾಂಗದ ಅರೆಭಾಷೆ ಕಾರ್ಯಕ್ರಮ, ಮಹಿಳಾ ಸಂಘಟನೆ ಹಾಗೂ ಕೊಡಗು ಸಂಗಾತಿಗೆ ನಮ್ಮ**

ಶುಭ ಹಾರೈಕೆಗಳು

ನಿಮ್ಮ ಎಡೆಬಿಡದ ಪ್ರಯತ್ನ ವಿಶಿಷ್ಟವಾದದು

**ಶ್ರೀ ಹುದೇರಿ ಚಂಗಪ್ಪ ಸೋಮಣ್ಣ**
**ಶ್ರೀಮತಿ ಹೇಮಾವತಿ ಸೋಮಣ್ಣ**
ಮಗಳು **ಬೀನಾ**
ಮಗ **ಡಿಂಕೇಶ್**

ವಿಳಾಸ : ಶ್ರೀ ಹುದೇರಿ. ಸಿ. ಸೋಮಣ್ಣ
ಎಂ.ಐ.ಜಿ. 296, 'ಇ' ಬ್ಲಾಕ್
3ನೇ ಹಂತ, ವಿಜಯನಗರ
ಮೈಸೂರು ✆ (0821) 519674



# ಶ್ರದ್ಧಾಂಜಲಿ



ಶ್ರೀ ನಂಗಾರು ಸೋಮಪ್ಪ ರಾಮಯ್ಯ
ಜನನ : 27-07-1926
ಮರಣ : 10-02-1998

ಸರಳ ಜೀವನ, ವಿಶಾಲ ಮನೋಭಾವದ, ಉನ್ನತ ವಿಚಾರವಾದಿ, ಸ್ನೇಹ ನುಡಿಯ, ಮೃದು ಸ್ವಭಾವದ, ಸತ್ಯ ಪ್ರತಿಪಾದನೆಯ, ದಿಟ್ಟನಿಲುವಿನ, ಅರೆ ಕನ್ನಡ ಅಭಿಮಾನಿ, ಶಿಕ್ಷಣ ಅಭಿವೃದ್ಧಿಗಾಗಿ ಶ್ರಮಿಸಿದ ಧೀಮಂತ ವ್ಯಕ್ತಿ ಶ್ರೀ ನಂಗಾರು ಸೋಮಪ್ಪ ರಾಮಯ್ಯ. ಸ್ಥಾಪಕ ಅಧ್ಯಕ್ಷರು, ಲಿಟಲ್ ಫ್ಲವರ್ ಇಂಗ್ಲಿಷ್ ಶಾಲೆ, ಬೆಂಗಳೂರು, ಇವರು ನಮ್ಮನ್ನು ಅಗಲಿದರೂ ಅವರ ನೆನಪು ಹಚ್ಚಹಸಿರಾಗಿ ಉಳಿದಿದೆ.

ಮೃತರ ಆತ್ಮಕ್ಕೆ ದೇವರು ಚಿರಶಾಂತಿಯನ್ನು ಕೊಡಲೆಂದು ಕೋರುವ,

*ಆಡಳಿತ ಮಂಡಲಿ*
ಮುಖ್ಯೋಪಾಧ್ಯಾಯಿನಿ,ಶಿಕ್ಷಕ ವೃಂದ, ಹಾಗೂ ಶಾಲಾ ಮಕ್ಕಳು,
ಲಿಟಲ್ ಫ್ಲವರ್ ಇಂಗ್ಲಿಷ್ ಶಾಲೆ
ಹೆಚ್‌ಎಎಲ್ ಎರಡನೇ ಹಂತ, ಇಂದಿರಾನಗರ
ಬೆಂಗಳೂರು. ☎ 5263262



# ಶುಭಾಶಯಗಳು

ಎರಡನೆಯ ವರ್ಷಕ್ಕೆ ಕಾಲಿಡುತ್ತಿರುವ ಕೊಡಗು ಸಂಗಾತಿಯ ನಿರಂತರ ಯಶಸ್ಸಿಗಾಗಿ ಹಾಗೂ ಗೌಡ ಜನಾಂಗದ ಸಂಘಟನೆಯ ಯಶಸ್ಸಿಗಾಗಿ ನಮ್ಮ ಶುಭಕಾಮನೆಗಳು ಅರೆಭಾಷಿಕ ಕಾರ್ಯಕ್ರಮವು ಯಶಸ್ವಿಯಾಗಲೆಂದು ಹಾರೈಕೆ

**ಬ್ಯಾಂಕ್ ಅಂಡ್ ಪಬ್ಲಿಕ್ ಸೆಕ್ಟರ್ ಎಂಪ್ಲಾಯೀಸ್ ವೆಲ್‌ಫೇರ್ ಅಸೋಸಿಯೇಷನ್ (ರಿ), ಮೈಸೂರು**

| | | |
|---|---|---|
| ಅಧ್ಯಕ್ಷರು | : | ಕೈಲಾಸ್ ರಾಜ್, ಮೈಸೂರು |
| ಕಾರ್ಯದರ್ಶಿ | : | ಜಿ.ಪಿ. ದಿವಾಕರ್ , " |
| ಉಪಾಧ್ಯಕ್ಷರು | : | ಕೃಷ್ಣೇಗೌಡ, " |
| ಖಜಾಂಚಿ | : | ಗೋಪಾಲಕೃಷ್ಣ, " |
| ನಿರ್ದೇಶಕರು | : | ಲಿಂಗರಾಜು , " |
| " | : | ಡಿ. ಪಾಲಾಕ್ಷಯ್ಯ, " |
| " | : | ಯು.ಎ. ಕುಲಕರ್ಣಿ, " |
| " | : | ನಿತ್ಯಾನಂದ ಶೆಟ್ಟಿ, " |
| " | : | ಪದ್ಮನಾಭ ಶೆಟ್ಟಿ, " |
| " | : | ಓಸ್ವಾಲ್ ಡಿ ಸೋಜಾ, " |
| " | : | ವೀರಭದ್ರಾಚಾರ್ , " |

ಕಛೇರಿ ನಿರ್ವಹಣೆ ಓಡಿಯನ ಝೂನ್ಸಿ

****************************************

## ಅರೆಭಾಷೆ ಕಾರ್ಯಕ್ರಮದ ಶುಭ ಸಮಾರಂಭಕ್ಕೆ ಹಾರ್ದಿಕ ಶುಭಾಶಯಗಳು



**ಶ್ರೀಮತಿ ಮತ್ತು ಶ್ರೀ ನಾಟೋಳನ ಬಿ ಮಾಚಯ್ಯ**

ಕೂರ್ಗಳ್ಳಿ, ಮೈಸೂರು

C/o ಮೊನಪ್ಪ,
ಮಂಚೇಗೌಡನ ಕೊಪ್ಪಲು,
ಹಿನ್‌ಕಲ್ ಅಂಚೆ, ಮೈಸೂರು

ನಿದ್ರಾವಸ್ಥೆಯಲ್ಲಿದ್ದ ನಮ್ಮ ಜನಾಂಗದವರನ್ನು ಬಡಿದೆಬ್ಬಿಸಿ, ಸಂಘಟನೆಗೊಳಪಡಿಸಿ, ತಮ್ಮತನವನ್ನು ಅರಿತುಕೊಳ್ಳುವಂತೆ ಮಾಡುತ್ತಾ ಮುನ್ನಡೆಯುವ ನಿಮ್ಮ "ಕೊಡಗು ಸಂಗಾತಿಯ" ಪ್ರಥಮ ವರ್ಷದ ವಾರ್ಷಿಕೋತ್ಸವಕ್ಕೆ ನಮ್ಮ



**ಹೃತ್ಪೂರ್ವಕ ಶುಭಾಶಯಗಳು**



*ಯಿಂದ*

ಶ್ರೀ ಬೈತಡ್ಕ ಎ. ಬೆಳ್ಯಪ್ಪ, ಬಿ.ಎ., ಎಲ್.ಐ.ಸಿ. ಆಫ್ ಇಂಡಿಯಾ
ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ
ನಿರ್ದೇಶಕಿ, ಕೊಡಗು ಗೌಡ ಮಹಿಳಾ ಒಕ್ಕೂಟ
ಮಕ್ಕಳಾದ: ಬಿ. ಬಿ. ನಂಜಪ್ಪ **B.A., M.S.W., Dip. in P.R.**
*ಮಾನವ ಸಂಪನ್ಮೂಲ ವಿಭಾಗ, ಹಿಮಾಲಯ ಡ್ರಗ್ಸ್ ಕಂಪೆನಿ, ಬೆಂಗಳೂರು.*
ಶ್ರೀ ಬಿ.ಬಿ. ದಿನೇಶ್ , **Bsc., NIIT** ಮಡಿಕೇರಿ

— ವಂದನೆಗಳು —

ಮಡಿಕೇರಿ ನಗರದಲ್ಲಿ ತಮ್ಮ ಮನೆಯ ಒಂದು ಕೋಣೆಯನ್ನು ಕೊಡಗು ಸಂಗಾತಿ ಪತ್ರಿಕೆಗೆ ಯಾವುದೇ ಫಲಾಪೇಕ್ಷೆ ಬಯಸದೆ ಕಛೇರಿ ನಡೆಸಲು ಸಹಕರಿಸಿದ್ದಾರೆ. ಇವರಿಗೆ ಸಂಗಾತಿ ಬಳಗದ ವಂದನೆಗಳು.

*ಸಂಪಾದಕಿ*

# ನಂಗಾರು ಆಡಿಯೋ ಮತ್ತು ವೀಡಿಯೋ

ಪೊಳ್ಳ ಕಾಂಪ್ಲೆಕ್ಸ್ ಮಂಗಳೂರು ರಸ್ತೆ - ಮಡಿಕೇರಿ

ಕೊಡಗು ಸಂಗಾತಿಯ ಪ್ರಥಮ ವಾರ್ಷಿಕೋತ್ಸವದ
ಈ ಶುಭ ಸಂದರ್ಭದಲ್ಲಿ
ಸಂಗಾತಿ ಬಳಗಕ್ಕೆ ಶುಭಕಾಮನೆಗಳು. ಪತ್ರಿಕೆ ನಾಡಿನ ಉದ್ದಗಲಕ್ಕೂ ಹರಡಲಿ







*ಯಿಂದ*

ಮಾಲೀಕರು : ಶ್ರೀ ನಂಗಾರು ಮಣಿಮುತ್ತಪ್ಪ, ಶ್ರೀಮತಿ ಚಂದ್ರಮ್ಮ

ಮಗು : ನಿಧಿ

ನಂಗಾರು ಆಡಿಯೋ ಮತ್ತು ವೀಡಿಯೋ ಅಲಂಕಾರ ಚಿತ್ರಣ, ಮಡಿಕೇರಿ

ಜನಾಂಗದ ಹಿತ ಕಾಯುತ್ತಿರುವ

"ಕೊಡಗು ಸಂಗಾತಿಗೆ "

ನಮ್ಮ ಪ್ರೀತಿಯ

# ಶುಭಾಶಯಗಳು



ಮರಗೋಡು ಗ್ರಾಮ ಮತ್ತು ಅಂಚೆ
ಮಡಿಕೇರಿ

ಶ್ರೀ ಚೆರಿಯಮನೆ ಪಿ. ವಿಠಲ
ಶ್ರೀಮತಿ ಚೆರಿಯಮನೆ ರೇಣು ವಿಠಲ
ಕು|| ಸಿ.ಪಿ.ವಿ. ಸುಬ್ರಮಣ್ಯ ಬಿ.ಇ.
ಕು|| ಸಿ. ಪಿ.ವಿ. ನರೇಂದ್ರ ಬಿ.ಇ.
ಕು|| ಸಿ.ಪಿ.ವಿ. ಯೋಗಿತಾ



ನಮ್ಮ ಜನಾಂಗದ ಈ ಪತ್ರಿಕೆ ಹೀಗೆ ಹಲವು
ವಾರ್ಷಿಕೋತ್ಸವವನ್ನು ಕಂಡು ಹೆಮ್ಮರವಾಗಿ ಬೆಳೆಯಲಿ
ಎಂದು ಹಾರೈಸುತ್ತೇವೆ.

ನರಿಯಂದಡ ಗ್ರಾಮ
ಚೆಯಂಡಾಣೆ ಅಂಚೆ
ದಕ್ಷಿಣ ಕೊಡಗು

ಶ್ರೀ ತೋಟಂಬೈಲು ದೇವಯ್ಯ ಪುರಂದರ
ಶ್ರೀಮತಿ ಲೀಲಾವತಿ ದೇವಯ್ಯ
ಕುಮಾರಿ ಸರೋಜಿನಿ
ಕುಮಾರಿ ಜ್ಯೋತಿ
ಕುಮಾರ ಅನಂತಕುಮಾರ್

ಜನಾಂಗದ ಶ್ರೇಯಸ್ಸಿಗೆ ಶತಪ್ರಯತ್ನ ಪಟ್ಟು
ಹೊರತಂದ ನಿಮಗೆ ಮತ್ತು ಕೊಡಗು ಸಂಗಾತಿ
ವರ್ಷ ಪೂರೈಸಿದ ಸವಿನೆನಪಿಗಾಗಿ

## ಶುಭವನ್ನು ಕೋರುತ್ತೇನೆ

ಯಿಂದ

**ಬೈತಡ್ಕ ಅಯ್ಯಪ್ಪ ಜೋಯಪ್ಪ**

ಡೆಪ್ಯೂಟಿ ಸುಪರಿಟೆಂಡೆಂಟ್ ಆಫ್ ಪೋಲಿಸ್

ಕರ್ನಾಟಕ ಲೋಕಯುಕ್ತ, ಪೋಲಿಸ್‌ವಿಂಗ್, ಬೆಂಗಳೂರು ಡಿವಿಷನ್, ಬೆಂಗಳೂರು - 560 001

ಮನೆ. ನಂ. 6292, 2ನೇ ಮುಖ್ಯ ರಸ್ತೆ, ವಿಜಯನಗರ, 2ನೇ ಹಂತ, ಬೆಂಗಳೂರು - 560 040
ದೂರವಾಣಿ : 080/3300123

---

"ಕೊಡಗು ಸಂಗಾತಿಯ"

## ಪ್ರಥಮ ವಸಂತಕ್ಕೆ ಶುಭಾಶಯಗಳು



**ಶ್ರೀ ಬಳಪದ ಪಿ. ಸೋಮಣ್ಣ**

(ಕಾಫಿ ಪ್ಲಾಂಟರ್)

**ಶ್ರೀಮತಿ ಬಳಪದ ಹೇಮಾವತಿ ಸೋಮಣ್ಣ**

**ಕು|| ಯತೀಷ್ ಕುಮಾರ್**

**ಕು|| ಜಗದೀಶ್ ಸೋಮಣ್ಣ**

ಕಟ್ಟೆಮಾಡು ಗ್ರಾಮ ಮತ್ತು ಅಂಚೆ, ಮಡಿಕೇರಿ

**ಕೊಡಗು ಸಂಗಾತಿ ಪ್ರಥಮ ವರ್ಷದ**

**ವಾರ್ಷಿಕೋತ್ಸವಕ್ಕೆ ನಮ್ಮ**

**ಶುಭಾಶಯಗಳು**

ಗೌಡ ಜನಾಂಗದ ಪ್ರತಿಯೋರ್ವರು ಪತ್ರಿಕೆಯನ್ನು ಪ್ರೋತ್ಸಾಹಿಸಬೇಕಾಗಿ ಕೋರುವ

ಪಂಜಿಪಳ್ಳ ಮೋಟೇಗೌಡ ವೆಂಕಪ್ಪ, *ಉಪಾಧ್ಯಕ್ಷರು*, ಕೊಡಗು ಗೌಡ ವಿದ್ಯಾ ಸಂಘ, ಮಡಿಕೇರಿ

ಪಂಜಿಪಳ್ಳ ವೆಂಕಪ್ಪ ಇಂದ್ರಾಕ್ಷಿ, *ನಿರ್ದೇಶಕರು*, ಕೊಡಗು ಗೌಡ ವಿದ್ಯಾ ಸಂಘ, ಕೊಡಗು ಗೌಡ ಮಹಿಳಾ ಒಕ್ಕೂಟ, ಮಡಿಕೇರಿ

ಪಂಜಿಪಳ್ಳ ವೆಂಕಪ್ಪ ಮುರಳಿ, *ವ್ಯವಸ್ಥಾಪಕ* ಮಲೆನಾಡು ವಾರ್ತೆ,

ಪಂಜಿಪಳ್ಳ ದಿನೇಶ್‌ಕುಮಾರ್, *ಓಲಂ ಕಾಫಿ ಕಂಪನಿ, ಮಡಿಕೇರಿ*

ಪಂಜಿಪಳ್ಳ ಶ್ರೀಮತಿ ಜಯಶ್ರೀ ಮಂಜುನಾಥ್ ಹಾಗೂ ಅಳಿಯ ಕಾಳೇಕೋಟಿ ಮಾದಪ್ಪ ಮಂಜುನಾಥ್

ಕೆನರಾ ಬ್ಯಾಂಕ್ ಬಿಲ್ಡಿಂಗ್,

ಕಾಲೇಜು ರಸ್ತೆ, ಮಡಿಕೇರಿ - 571 201

✆ 25363 (08272)

▲▲▲▲▲▲▲▲▲▲▲▲▲▲▲▲▲▲▲▲▲▲▲▲▲▲▲▲▲▲▲▲▲▲▲▲▲▲

❋❋❋❋❋

ಕೊಡಗು ಸಂಗಾತಿಯ ಪ್ರಥಮ ವಾರ್ಷಿಕೋತ್ಸವಕ್ಕೆ

ಹಾರ್ದಿಕ ಶುಭಾಶಯಗಳು

❋❋❋❋❋



ಶ್ರೀ ಪಟ್ಟಡ ಮುತ್ತಣ್ಣ ತಿಮ್ಮಯ್ಯ

ಶ್ರೀಮತಿ ಪಟ್ಟಡ ರುಕ್ಮಿಣಿ ತಿಮ್ಮಯ್ಯ

ಕು॥ ನೇತ್ರಾ

ಕು॥ ಪವನ

ಕು॥ ಕೀರ್ತಿ

ಮಾ॥ ಸುಭಾಷ್

ಅವಂದೂರು ಗ್ರಾಮ ಮತ್ತು ಅಂಚೆ, ಮಡಿಕೇರಿ, ಕೊಡಗು

✆ **08272/35644**

ತುಂಬಾ ಚೆನ್ನಾಗಿ ಮೂಡಿ ಬರಲಿ, ಕುಲದೇವತಾ
ಆರ್ಶೀವಾದದ ಪತ್ರಿಕೆ ಯಾವುದೇ ಕಾರಣದಿಂದ ನಿಲ್ಲಬಾರದು
ಎಂದು ಹಾರೈಸುವ



ಶ್ರೀ ಉಳುವಾರನ ಅಪ್ಪಯ್ಯ ಪೊನ್ನಪ್ಪ
ಶ್ರೀಮತಿ ಶೀಲಾ ಪೊನ್ನಪ್ಪ
ಚಿ|| ಪ್ರಸನ್ನ ಪೊನ್ನಪ್ಪ
ಕು|| ಗೀತಾ ಪೊನ್ನಪ್ಪ
ಕಾಂತೂರು ಗ್ರಾಮ, ಮರಗೋಡು

ಕೊಡಗು ಸಂಗಾತಿಯು ಹತ್ತು ಕುಟುಂಬ ಹದಿನೆಂಟು ಗೋತ್ರ ಸಮಸ್ತ
ಕುಲಭಾಂಧವರ ಜೀವನ ಸಂಗಾತಿಯಾಗುವುದರೊಂದಿಗೆ, ಹೃದಯ ಸಂಗಾತಿಯಾಗಿ
ಹೆಮ್ಮರವಾಗಿ ಬೆಳೆಯಲಿ ಎಂದು ಹಾರೈಸುವ

**ಶ್ರೀ ಗುಡ್ಡೆಮನೆ ಬೆಳ್ಯಪ್ಪ ಮತ್ತು ಜಾನಕಿ ಬೆಳ್ಯಪ್ಪ**, ಬಲಮುರಿ ಗ್ರಾಮ

**ಗುಡ್ಡೆಮನೆ ರಮೇಶ** ಬಿ.ಕಾಂ.
(ಉಪಾಧ್ಯಕ್ಷರು, ಕೊಡಗು ಗೌಡ ಸಾಂಸ್ಕೃತಿಕ ಅಕಾಡಮಿ ಮಡಿಕೇರಿ) ಸಂಚಾಲಕರು, ಗುಡ್ಡೇಮನೆ ಅಪ್ಪಯ್ಯ ಗೌಡ
ಸಂಸ್ಮರಣ ಸಮಿತಿ, ಮಡಿಕೇರಿ, ಇಲಾಖೆ ಆಂತರಿಕ ಲೆಕ್ಕ ಪರಿಶೋಧಕರು,
ಕೊಡಗು ಕಾಫಿ ಬೆಳೆಗಾರ ಸಹಕಾರರ ಸಂಘ ಮಡಿಕೇರಿ)

**ಶ್ರೀಮತಿ ಚಂದ್ರ ರಮೇಶ ಬಿ.ಕಾಂ.**
ಮಕ್ಕಳು : **ಮೋಹ ಮತ್ತು ಸ್ನೇಹ**
ದೂರವಾಣಿ ಮನೆ : 24555 ಕಛೇರಿ : 29491

**ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಮಹಿಳಾ ಸಂಘಟನೆ ಮೈಸೂರು ಹಾಗೂ ಕೊಡಗು ಸಂಗಾತಿ ಪತ್ರಿಕೆಗೆ ನಮ್ಮ ಶುಭಾಶಯಗಳು**





ಶ್ರೀ ಅಮೆ. ಕೆ. ಶಿವರಾಯ್
ಶ್ರೀಮತಿ ಚಂದ್ರಪ್ರಭರಾಯ್
ಮಕ್ಕಳು : ಹೇಮಂತರಾಯ್
ಅಶ್ವಿನಿ ರಾಯ್

ಮನೆ ನಂ. 100, B
'ಶರತ್', ಆನಂದ ಮಾರ್ಗ
ಸಿದ್ಧಾರ್ಥನಗರ, ಮೈಸೂರು

## ಅರೆಭಾಷೆ ಸಾಂಸ್ಕೃತಿಕ ಸಮಿತಿ, ಮಹಿಳಾ ಒಕ್ಕೂಟ ಮೈಸೂರು ಮತ್ತು ಕೊಡಗು ಸಂಗಾತಿಗೆ ಶುಭಾಶಯಗಳು

**ಆಟೋಮೋಟಿವ್ ಆಕ್ಸೆಲ್ಸ್ ಲಿಮಿಟೆಡ್**

ಕೊಡಗು ಗೌಡ ಮಿತ್ರರ ಬಳಗ, ಹೂಟಗಳ್ಳಿ, ಮೈಸೂರು

ಶ್ರೀ ಮೂಟೇರ ನಂಜಪ್ಪ
ಶ್ರೀ ಮುಕ್ಕಾಟಿ ಉಲ್ಲಾಸ
ಶ್ರೀ ಚಂಡಿರ ದೇವರಾಜ್
ಶ್ರೀ ಚರ್ಕನ ಲವ



ಶ್ರೀ ಚಿಕ್ಕೋಡಿ ರಮೇಶ್
ಶ್ರೀ ಪೂಜಾರಿ ಕುಮೋಧರ
ಶ್ರೀ ನೆಕ್ಕಿಲನ ಹರೀಶ್
ಶ್ರೀ ಪಟ್ಟಡ ಜಗದೀಶ್

2ನೇ ವರ್ಷಕ್ಕೆ ಕಾಲಿಡುತ್ತಿರುವ "ಅರೆಭಾಷೆ ಕೊಡಗು ಸಂಗಾತಿ" ಗೆ

**ಶುಭಾಶಯಗಳು.**

"ಹುಟ್ಟಿದಾಗಲೂ ಬಿಳಿಬಟ್ಟೆ, ಮರಳಿ ಮಣ್ಣಿಗೆ ಹೋಗುವಾಗಲೂ ಬಿಳಿಬಟ್ಟೆ, ಸರ್ಕಾರಿ ಹುದ್ದೆಯಲ್ಲಿ ಬಿಳಿ ಬಟ್ಟೆ ಧರಿಸಿ, ಆರೋಗ್ಯ ಇಲಾಖೆಯಲ್ಲಿ ಶುಶ್ರೂಷಕರಾಗಿ "ಜನ ಸೇವೆಯೇ ಜನಾರ್ಧನನ ಸೇವೆ" ಎಂದು ನಂಬಿ ಕೆ.ಆರ್. ಆಸ್ಪತ್ರೆ ಮೈಸೂರಿನಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕುದುಪಜೆ ಶ್ರೀ ಕುಶಾಲಪ್ಪ ಮತ್ತು ಶ್ರೀಮತಿ ಕಮಲಾಕ್ಷಿ ಕುಶಾಲಪ್ಪ, ತಾವುನಾಡು ಇವರಿಂದ ಶುಭ ಹಾರೈಕೆ.



**ಕೆ.ಕೆ. ಕುಶಾಲಪ್ಪ**
ನಂ. 788, ಕಾಂಟೂರ್ ರಸ್ತೆ,
ಗೋಕುಲಂ 3ನೇ ಹಂತ, ಮೈಸೂರು
ದೂರವಾಣಿ : 513047

---

**ಅರೆಭಾಷಿಕ ಸಾಂಸ್ಕೃತಿಕ ಸಮಿತಿ,**
**ಗೌಡ ಮಹಿಳಾ ಒಕ್ಕೂಟ ಮೈಸೂರು ಹಾಗೂ**
**ಕೊಡಗು ಸಂಗಾತಿಗೆ ಶುಭಾಶಯಗಳು**



ನಂ. 1047/28 A, 2 ನೇ ಮೇನ್
7ನೇ ಕ್ರಾಸ್, ವಿದ್ಯಾರಣ್ಯಪುರಂ, ಮೈಸೂರು
✆ 481052

ಶ್ರೀ ಕರ್ಣಯ್ಯನ ಪಿ. ಲಕ್ಷ್ಮಣ
ಶ್ರೀಮತಿ ಕರ್ಣಯ್ಯನ ನಿರ್ಮಲ



## ಏಕೈಕ ಪತ್ರಿಕೆ ಕೊಡಗು ಸಂಗಾತಿಗೆ ಮತ್ತು ಆರೆಭಾಷಿಕಾ ಕಾರ್ಯಕ್ರಮಕ್ಕೆ ಶುಭಾಶಯಗಳು

**ಶ್ರೀಮತಿ ಮತ್ತು ಶ್ರೀ ಸೆಟ್ಟೆಜನ ಎ. ಚೆಂಗಪ್ಪ**

108, 9 ನೆ ಯ ಅಡ್ಡರಸ್ತೆ,
ರಾಘವೇಂದ್ರ ಬಡಾವಣೆ, ಉದಯಗಿರಿ ಪೋಸ್ಟ್,
ಮೈಸೂರು - 19

---

## ನಿಮ್ಮ ಶ್ರಮಕ್ಕೆ ನಾವು ಚಿರಋಣಿಗಳು

ಶ್ರೀ ಕೆದಂಬಾಡಿ ಜಿ. ಮುದ್ದಪ್ಪ
ಶ್ರೀಮತಿ ಕೆದಂಬಾಡಿ ರಾಧಾ ಮುದ್ದಪ್ಪ
ಮಕ್ಕಳಾದ ಶಾಂತ ಮತ್ತು ಪ್ರವೀಣಕುಮರ್



ವಿಳಾಸ : **418, 2ನೇ** ಮುಖ್ಯ ರಸ್ತೆ, ಬನ್ನಿಮಂಟಪ, "ಸಿ" ಲೇಔಟ್, ಮೈಸೂರು

*****



ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಗೌಡ ಮಹಿಳಾ ಒಕ್ಕೂಟ, ಮೈಸೂರು
ಹಾಗೂ ಕೊಡಗು ಸಂಗಾತಿಗೆ ಶುಭಾಶಯಗಳು

**ಶ್ರೀ ಮುಕ್ಕಾಟೀರ ಬೆಳ್ಯಪ್ಪ ಭೀಮಯ್ಯ**
**ಶ್ರೀಮತಿ ಲೀಲಾ ಭೀಮಯ್ಯ**

**5th B.N., K.S.R.P**
**Lalith Mahal Road, Mysore**

---

**ಬತ್ತುತ್ತಿರುವ ಗೌಡ ಸಂಸ್ಕೃತಿಯ ಜಲದ ಸೆಲೆಯ ಶೋಧನೆಯಲ್ಲಿರುವ**
**ಭಗೀರಥರಿಗೆ ಶುಭಾಶಯಗಳು**
**ನಿಮ್ಮ ಸಾಹಸ ನಮ್ಮ ಸಂಸ್ಕೃತಿಗೆ ಸಂಭ್ರಮ ತರಲಿ**
**ಶುಭಾಶಯಗಳೊಂದಿಗೆ**

ಕತ್ರಿಕೊಲ್ಲಿ ವಸಂತಕುಮಾರ
ಲತಾ ಮತ್ತು ಮಕ್ಕಳು
ಪ್ರಿನ್ಸಿ, ಗೋಲ್ಡಿ

**LIG 2- 1118**
ಕಲ್ಯಾಣಗಿರಿ ನಗರ
ಮೈಸೂರು - 570 019

ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಗೌಡ ಮಹಿಳಾ ಒಕ್ಕೂಟ,
ಮೈಸೂರು ಹಾಗೂ ಕೊಡಗು ಸಂಗಾತಿಗೆ
ಶುಭಾಶಯಗಳು



**ಕೋಳಿಮಾಡು ಡಿ. ಅಶೋಕ**
**ಹೋಟೆಲ್ ರಿಡ್ಜ್**
**ಮೈಸೂರು**

ನಂ. 4004
ಮೊದಲನೆಯ ಮುಖ್ಯ ರಸ್ತೆ, ಗಾಂಧಿ ನಗರ ,
ಮೈಸೂರು





*WITH BEST COMPLIMENTS FROM :*



**Ketolira Family**
**Akkamma Ayyanna**
**K.A. Jaganathan**
**K.J. Indira Jaganath**
**K.J. Pradeep**
**K.J. Sandeep**
**K.S. Kalavathi Somanna**
**K.S. Nisehith**
**K.S. Pradhan**
**K. Shaila Ramakrishna**
**K.R. Charan**



**ಅರೆಭಾಷೆ ಸಾಂಸ್ಕೃತಿಕ ಸಮಿತಿ,**
**ಮಹಿಳಾ ಒಕ್ಕೂಟ ಮತ್ತು ಕೊಡಗು ಸಂಗಾತಿಗೆ**
**ಶುಭಾಶಯಗಳು**



**ಶ್ರೀಮತಿ ಮತ್ತು ಶ್ರೀ ನಂಗಾರು. ಎ. ಸೋಮಣ್ಣ**

ನಂ. 615/K
2ನೇ ಮುಖ್ಯ ರಸ್ತೆ, 5ನೇ ಅಡ್ಡ ರಸ್ತೆ
ಆಲನಹಳ್ಳಿ ಬಡಾವಣೆ, ಮೈಸೂರು



***Best Compliments From :***

**DAMBEKODI POORNACHANDRA THAMMAIAH**
**DAMBEKODI JASHMI POORNACHANDRA**

**And**

**DAUGHTER**
**BABY DAMBEKODI MOULYA PONNAPPA**



### ★ ಕಾರ್ಯಕ್ರಮಕ್ಕೆ ಧನ ಸಹಾಯ ಮಾಡಿದವರು ★

ಎಸ್.ಡಿ. ಭಾರತ್, *ನಿವೃತ್ತ ಅಭಿಯಂತರರು*
ಕೆ.ಯು. ಚೆಂಗಪ್ಪ, *ಮ್ಯಾನೇಜರ್*
ಪೇರಿಯನ. ಎಸ್. ಉತ್ತಯ್ಯ
ಹೊಸೂರು ಕೆ. ಸೀತರಾಮ್
ನಡುವಟ್ಟೀರ ಶಿವಪ್ರಕಾಶ್
ಕುಯ್ಯಮುಡಿ ಕೃಷ್ಣಪ್ಪ
ಶ್ರೀ ಮತಿ ಮತ್ತು ಶ್ರೀ ದಾಯನ ಗಪ್ಪು
ಶಂಕರನ ಬಸಪ್ಪ, ಮೈಸೂರು

ಕುಂಭುಗೌಡನ ಮುತ್ತಮ್ಮ
ದಂಬೆಕೋಡಿ ಯಸ್. ಭಾಗೀರಥಿ
ಕೆ. ಗಿರಿಯಪ್ಪಗೌಡ
ಕೆ. ರಾಘುವಗೌಡ
ಕಡ್ಲೆ ಮಾದಪ್ಪ
ಹವಲ್ದಾರ್ ವಿಶುಕುಮಾರ್ ಕೆ.ಡಿ., ಜಲಂದರ್
ಎಂ. ಎಂ. ತುಳಸಿರಾಮ್
ಕಾಳೇರಮ್ಮನ ಬಸಪ್ಪ, ಆವಂದೂರು

ಕಡ್ಯದ ಗಣೇಶ, ಮೈಸೂರು

ಅಳಿದು ಹೋಗುತ್ತಿದ್ದ ಭಾಷೆಗೆ ಪುನರ್ ಚೇತನ ನೀಡುತ್ತಿರುವ
ಅರೆಭಾಷಿಕ ಸಾಂಸ್ಕೃತಿಕ ಸಮಿತಿ,
ಗೌಡ ಮಹಿಳಾ ಸಂಘಟನೆ ಹಾಗೂ ಕೊಡಗು ಸಂಗಾತಿಗೆ

ಶುಭಾಶಯಗಳು



ಶ್ರೀಮತಿ ಮತ್ತುಶ್ರೀ ಚೆಟ್ಟಿಮಾಡ ಯು. ಜನಾರ್ಧನ



ಮನೆ ನಂ. 3, ಕೂರ್ಗಳ್ಳಿ
ಸರ್ಕಾರಿ ಪ್ರೈಮರಿ ಸ್ಕೂಲ್ ಹತ್ತಿರ,
ಬೆಳವಾಡಿ ಅಂಚೆ ಹತ್ತಿರ, ಮೈಸೂರು



**ಅರೆಭಾಷೆಯ ಗೌಡ ಮಹಿಳಾ ಸಂಘಟನೆ
ಹಾಗೂ ಕೊಡಗು ಸಂಗಾತಿಗೆ
ನಮ್ಮ ಶುಭಾಶಯಗಳು**

ಡಿ.ಯಸ್. ನಿರ್ಮಲ
*ಕಿರಿಯ ಕಛೇರಿ ಸಹಾಯಕರು*
ರೇಷ್ಮೆ ಇಲಾಖೆ, ಮೈಸೂರು



ಅರೆಭಾಷಿಕ ಸಾಂಸ್ಕೃತಿಕ ಸಮಿತಿ,

ಗೌಡ ಮಹಿಳಾ ಸಂಘಟನೆ ಹಾಗೂ ಕೊಡಗು

ಸಂಗಾತಿಗೆ ನಮ್ಮ

## ಹಾರ್ದಿಕ ಶುಭಾಶಯಗಳು

ಶ್ರೀಮತಿ ಮತ್ತು ಶ್ರೀ ಕರೆಮನೆ ಜಯಕುಮಾರ್




538, 15ನೇ ಮುಖ್ಯ ರಸ್ತೆ,
6ನೇ ಅಡ್ಡ ರಸ್ತೆ,
ಸರಸ್ವತಿಪುರಂ, ಮೈಸೂರು

---

ಜನಾಂಗದ ಏಳಿಗೆಗಾಗಿ ದುಡಿಯುತ್ತಿರುವ ಅರೆಭಾಷೆ ಸಾಂಸ್ಕೃತಿಕ ಸಮಿತಿ,

ಗೌಡ ಮಹಿಳಾ ಸಂಘಟನೆ ಹಾಗೂ ಕೊಡಗು ಸಂಗಾತಿ ಬಳಗಕ್ಕೆ

ನಮ್ಮ ಶುಭಾಶಯಗಳು

ಎಂ. ಎ. ಕಲ್ಯಾಣಿ

ಮುಖ್ಯರಸ್ತೆ, ಇ ಮತ್ತು ಎಫ್ ಬ್ಲಾಕ್
ರಾಮಕೃಷ್ಣನಗರ
ಮೈಸೂರು

# ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಗೌಡ ಮಹಿಳಾ ಸಂಘಟನೆ ಹಾಗೂ ಕೊಡಗು ಸಂಗಾತಿಗೆ ನಮ್ಮ ಶುಭಾಶಯಗಳು

ಅಣ್ಣೇಚ್ಚಿರ ಬಸಪ್ಪ ಜಯರಾಂ

1156, 4/10ಮುಖ್ಯರಸ್ತೆ,
2ನೇ ಹಂತ, ಇ ಮತ್ತು ಎಫ್ ಬ್ಲಾಕ್
ರಾಮಕೃಷ್ಣನಗರ, ಮೈಸೂರು

---

# ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಗೌಡ ಮಹಿಳಾ ಸಂಘಟನೆ ಹಾಗೂ ಕೊಡಗು ಸಂಗಾತಿಗೆ

# ನಮ್ಮ ಹಾರ್ಧಿಕ ಶುಭಾಶಯಗಳು

ಕಡ್ಯದ ಯು. ಚುಂಡಯ್ಯ
ಸರೋಜ ಚುಂಡಯ್ಯ

ನಂ. 1376, ಹೇಮಂತ ನಿಲಯ
2ನೇ ಷಂತ, 2ನೇ ಅಡ್ಡ ರಸ್ತೆ,
ಶ್ರೀರಾಂಪುರ, ಮೈಸೂರು



**ಹೇಳಿದಂಗೆ ನಡೆವ ಕೊಡಗು ಸಂಗಾತಿಗೆ**

**ಶುಭಾಶಯಗಳು**

ಬೊಳಿಯನ ಪೊನ್ನಪ್ಪ ಕೃಷ್ಣಪ್ಪ (ಕಾಫಿ ಪ್ಲಾಂಟರ್)

ಶ್ರೀಮತಿ ಲಲಿತ ಕೃಷ್ಣಪ್ಪ (ಪ್ರೇಮ)

ಕುಮಾರಿ ಕವಿತಾ, ಲಕ್ಷ್ಮಿ, ಮಮತ

ಕೋಕೇರಿ ಗ್ರಾಮ, ಚೆಯ್ಯಂಡಾಣೆ ಅಂಚೆ
ಉತ್ತರ ಕೊಡಗು

---

**ನಿಮ್ಮ ಹಠತನ, ನಿಷ್ಠೆಯ, ಸತ್ಯತನ, ಹಿರಿಯರ ಮೇಲೆ ಪ್ರೀತಿಯಿಂದ ತಂದ ಕೊಡಗು ಸಂಗಾತಿ ಪತ್ರಿಕೆಯ ಪ್ರಥಮ ವಾರ್ಷಿಕೋತ್ಸವಕ್ಕೆ ಶುಭಾಶಯಗಳು**

ಕೊರಿಯಾರ್ ಮುತ್ತಣ್ಣ ಅಪ್ಪಣ

ಪೊನ್ನಮ್ಮ ಅಪ್ಪಣ, ಸತ್ಯ (ರವಿ), ಚಂದ್ರಶೇಖರ

ಕೆದಮುಳ್ಳೂರು ಗ್ರಾಮ ಮತ್ತು ಅಂಚೆ

ವಿರಾಜಪೇಟೆ, ಕೊಡಗು

---

**'ಕೊಡಗು ಸಂಗಾತಿ' ಇನ್ನು ಚೆನ್ನಾಗಿ ಮೂಡಿ ಬರಲೆಂದು ಹಾರೈಸುತ್ತೇವೆ.**

ಶ್ರೀ ಪಾಂಡನ ರಾಮಯ್ಯ ಪ್ರಕಾಶ್

ಶ್ರೀಮತಿ ಪುಷ್ಪವೇಣಿ ಪ್ರಕಾಶ್

ಕುಮಾರಿ ಜಸ್ಮಿನ್ ಪ್ರಕಾಶ್,- ಕುಮಾರಿ ನೂತನ್ ಪ್ರಕಾಶ್, -ಕುಮಾರ ಗಜೇಂದ್ರ ಪ್ರಕಾಶ್

ಮರಗೋಡು ಗ್ರಾಮ ಮತ್ತು ಅಂಚೆ, ಮಡಿಕೇರಿ

ದೂರವಾಣಿ : 08272/31554

---

**ಗೌಡ ಭಾಷೆಗೆ ಪ್ರೋತ್ಸಾಹ ಕೊಡುತ್ತಿರುವ ಕೊಡಗು ಸಂಗಾತಿಗೆ**

**"ಶುಭಾಶಯಗಳು"**

ಶ್ರೀ ಕರಣಯ್ಯನ ಅಪ್ಪಚ್ಚ ಲೋಹಿತಾಶ್ವ

ಶ್ರೀಮತಿ ಕವಿತಾ ಲೋಹಿತಾಶ್ವ

ಕು॥ ಭರತ್ ಲೋಹಿತಾಶ್ವ ಕು॥ ಅರುಣ ಲೋಹಿತಾಶ್ವ

*ಹೊಸಕೇರಿ ಗ್ರಾಮ, ಮರಗೋಡು ಅಂಚೆ, ಮಡಿಕೇರಿ*

## ಅರೆಭಾಷೆ ಸಾಂಸ್ಕೃತಿಕ ಸಮಿತಿ, ಗೌಡ ಮಹಿಳಾ ಸಂಘಟನೆ ಹಾಗೂ ಕೊಡಗು ಸಂಗಾತಿಗೆ ಶುಭ ಹಾರೈಕೆಗಳು

ಡಾ|| ಕಾನಡ್ಕ ಪದ್ಮಾಜಿ

146, ಅನುಗ್ರಹ, 14ನೇ ಅಡ್ಡ ರಸ್ತೆ, ಅನಿಕೇತನ ರಸ್ತೆ, ಕುವೆಂಪುನಗರ, ಮೈಸೂರು

## ಶುಭಾಶಯಗಳೊಂದಿಗೆ

ಕೆ.ಎಸ್. ಕುಸುಮಾವತಿ

2229, 3ನೇ ಅಡ್ಡ ರಸ್ತೆ,
ಪಚ್ಚೆ ರಸ್ತೆ, ಕೆ ಬ್ಲಾಕ್
ಕುವೆಂಪುನಗರ, ಮೈಸೂರು - 23

## ಅರೆಭಾಷೆ ಕಾರ್ಯಕ್ರಮಕ್ಕೆ ನಮ್ಮ ಶುಭಾಶಯಗಳು

ಬಿದ್ರುಪಣೆ ವೈ. ಜನಾರ್ಧನ



582, ಮುಖ್ಯ ರಸ್ತೆ, ವಿನಾಯಕ ದೇವಸ್ಥಾನ ಹಿಂಭಾಗ,
ಬೈರವೇಶ್ವರ ನಗರ, ಹೆಬ್ಬಾಳು, ಕೈಗಾರಿಕಾ ಬಡಾವಣೆ,
ಮೈಸೂರು

## ಶುಭಾಶಯಗಳೊಂದಿಗೆ

ಕೈಬಿಲಿರ ಎ. ಚಂಗಪ್ಪ

1041, 4ನೇ ಹಂತ,
15ನೇ ಮುಖ್ಯರಸ್ತೆ, ತೊಣ್‌ಚಿ ಕೊಪ್ಪಲು,ಮೈಸೂರು

**ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಮೈಸೂರು, ದಕ್ಷಿಣ ಕನ್ನಡ ಹಾಗೂ ಕೊಡಗು ಗೌಡ ಮಹಿಳಾ ಸಂಘಟನೆ ಮತ್ತು ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆ ಮೈಸೂರು, ಇವರ ಸಂಯುಕ್ತ ಆಶ್ರಯದಲ್ಲಿ ನಡೆಯಲಿರುವ ಅರೆಭಾಷೆ ಕಾರ್ಯಕ್ರಮ ಹಾಗೂ ಗೌಡ ಜನಾಂಗದ ಸಂಘಟನೆಗೆ ದುಡಿಯುತ್ತಿರುವ ನಿಮಗೆಲ್ಲರಿಗೂ**

**ಶುಭಾಶಯಗಳು**



ಶ್ರೀ ಅಮ್ಮಾಜೀರ ಎಸ್. ಪೊನ್ನಪ್ಪ

ಶ್ರೀಮತಿ ಅಮ್ಮಾಜೀರ ಲೀಲಾವತಿ ಪೊನ್ನಪ್ಪ

ಮತ್ತು

ಕಾವೇರಿನಾಡು ಸಹಕಾರಿ ಸಂಸ್ಥೆ

ಕಾವೇರಿನಾಡು ವಿದ್ಯಾ ಸಂಸ್ಥೆ

ಕಾವೇರಿನಾಡು ರೆಸಿಡೆನ್ಸಿಯಲ್ ಇಂಗ್ಲೀಷ್ ಸ್ಕೂಲ್

ಕಾಡುಕರೇನಹಳ್ಳಿ ಗ್ರಾಮ, ಮಹದೇವಪುರ ಕಸಬಾ ಹೋಬಳಿ,

ಬೆಂಗಳೂರು ಗ್ರಾಮಾಂತರ ಜಿಲ್ಲೆ

**ನಂ. 20, 1ನೇ ಮುಖ್ಯರಸ್ತೆ, 4ನೇ ಅಡ್ಡರಸ್ತೆ, ಸಾಕಮ್ಮ ಗಾರ್ಡನ್, ಬಸವನಗುಡಿ**

**ಬೆಂಗಳೂರು - 560 004 ✆ 080 - 642822**

# ಕಾಲಕಾಂಡ ಕಾರೋಣರ ಸ್ಮರಣೆ

ದಿ॥ ದಂಬೆಕೋಡಿ ಸುಬ್ರಾಯ ಮತ್ತು ರಾಮಕ್ಕ ದಂಪತಿಗಳು



| ದಂಬೆಕೋಡಿ ಸುಬ್ರಾಯ | ರಾಮಕ್ಕ |
|---|---|
| ಜನನ 24-8-1907 | ಜನನ 11-04-1916 |
| ಮರಣ 11-4-1996 | ಮರಣ 13-10-1991 |

ಕೊಡಗು ನಾಡಿನ ಗೌಡ ಜನಾಂಗದ ಏಳ್ಗೆಗಾಗಿ ಅವಿರತವಾಗಿ ಶ್ರಮಿಸಿ,
ದುಡಿದ ಮೇರು ದಂಪತಿಗಳು



Printed by M.K. Thammaiah and Published by Kodagu Sangathi on behalf of Pattada P. Sheelamani and Printed at ASHIRWAD PRINTERS, 180/A, 6th Main, Vinayakanagar, Mysore - 12. Published at Mysore, Editor PATTADA P. SHEELAMANI, No. 35, 1st Cross, 4th Block ( Near Divisional Telephone Office), Jayalakshmipuram, Mysore - 570 012 ✆ 516771



## "ಕಾವೇರಿಯ ಮಡಿಲಲ್ಲಿ"

ನಾನೊಮ್ಮೆ ಸಾಗಿದೆ ತಲಕಾವೇರಿಯತ್ತ
ಕಂಗಳಾಡಿಸಿದೆ ಸೌಂದರ್ಯದ ಬೆಟ್ಟಗಳತ್ತ
ನೂರಾರು ಮೆಟ್ಟಿಲ ಹತ್ತಿ ನಿಂತೆನಾ ಬೆಟ್ಟದ ತುದಿಯಲಿ
ಬೆಟ್ಟಗಳು ನಿಂತಿಹವು ಬಿಳಿ ಮೋಡಗಳ ಸೆರಗಿನಲಿ
ಶಿಲೆಯೊಳಗೆ ಕಲೆಯಾಗಿ ನಿಂತಿಹಳು ತಾಯಿ ಕಾವೇರಿ
ಭೂಮಿಯೊಳಗೆ ನೀ ನೆಲೆಸಿರುವೆ ನಮ್ಮೆಲ್ಲರ ಆಶ್ರಯದಾತೆ॥

ಭಕ್ತರ ಮನವನ್ನು ತಣಿಸುವಳು ಒಡಲೆಂಬ ಕೊಳದಲ್ಲಿ
ಶ್ರದ್ಧೆಯಿಂದ ಪೂಜೆಗೈಯುವರು ತುಸು ತಾಸುಗಳ ಮುಂದೂಡಿ
ಕೊನೆಗೆ ಕಾಣುವರು ಆನಂದವೆಂಬ ಅರಮನೆಯ
ಆ ಅರಮನೆಯ ಗೋಪುರವೇ ಕಾವೇರಿ ತಾಯಿಯ ಆಶ್ರಯ॥

ಝುಳ ಝುಳನೆ ಹರಿಯುತಿಹಳು ಪ್ರಕೃತಿಯ ಸೆರಗಲ್ಲಿ
ಭೋರ್ಗರೆದು ಹರಿಯುತಿಹಳು ಭಾಗಮಂಡಲದ ಮಡಿಲಲ್ಲಿ
ಎಲ್ಲೆಡೆಯಿಂದಿಲ್ಲಿಗೆ ಧಾವಿಸುವರು ಕಾವೇರಿ ದರುಶನಕ್ಕೆ
ಅಭಯವ ನೀಡುವಳು ದರುಶನವ ಕೋರಿ ಬಂದ ಭಕ್ತರಿಗೆ॥

ಕಾವೇರಿ ತಾಯಿಯ ಬುನಾದಿಯಾಗಿ ನಿಂತಿಹುದು ದೇವಾಲಯವೊಂದು
ಆ ದೇವಾಲಯವೇ ಭಾಗಮಂಡಲದಲ್ಲಿನ ಭಗಂಡೇಶ್ವರ ದೇವಾಲಯ
ಆಗಿಹುದಿಲ್ಲಿ ಕಾವೇರಿ, ಕನ್ನಿಕೆ ಸುಜ್ಯೋತಿಗಳ ತ್ರಿವೇಣಿ ಸಂಗಮ
ಜಳಕದಿಂದ ಆಗುವುದಿಲ್ಲಿ ಪಾಪಗಳ ಪರಿಹಾರ॥

ಸಹಸ್ರಾರು ಜನತೆಯ ಅನ್ನದಾತೆಯಾಗಿ ನಿಂತಿಹಳು
ಪ್ರೇಕ್ಷಕರ ಮನ ತಣಿಸಿಹಳು ಕೃಷ್ಣರಾಜ ಸಾಗರದೊಳು
ಉಡುಪಾಗಿ ತೊಟ್ಟಿಹಳು ಪ್ರಕೃತಿ ಸಿರಿಯ ಸೊಬಗನ್ನು
ಹೊತ್ತು ನಿಂತಿಹಳು ತಾಯಿ ಸೌಂದರ್ಯದ ಸೊಬಗನ್ನು॥

ಅಂಬ್ರಾಟ ಭಗವತಿ ಪ್ರಸಾದ್ ತಮ್ಮಯ್ಯ
ಬಿ.ಎ., ಬಿ.ಎಡ್., ಎಂ.ಎ. (ಹಿಂದಿ)
ಕೋರಂಗಾಲ ಗ್ರಾಮ, ಭಾಗಮಂಡಲ







## ಕೊಡಗೂರು

ಬನ್ನಿರಿ ನೋಡಿರಿ ಕೊಡಗೂರು
ಕನ್ನಡ ನಾಡಿನ ಚೆಲುವೂರು
ಸ್ವಾಗತ ನೀಡಿದೆ ಕೊಡಗೂರು
ಸುಸ್ವಾಗತ ನೀಡಿದೆ ಕೊಡಗೂರು

ಪಶ್ಚಿಮ ಘಟ್ಟದ ಸಾಲಲಿ ಮೆರೆದಿದೆ
ಚೆಲುವಿಗೆ ಹೆಸರಾದ ಕೊಡಗೂರು
ಪ್ರಕೃತಿ ಚೆಲುವೆಲ್ಲಾ ಚೆಲ್ಲಾಟವಾಡುವ
ಭೂರಮೆ ರಮಿಸುವ ಕೊಡಗೂರು

ಬ್ರಹ್ಮಗಿರಿಯಿಂದ ಪುಷ್ಪಗಿರಿ ಪರಿ
ಯಂತರ ಹಬ್ಬಿದ ಕೊಡಗೂರು
ಗಿರಿಗಳ ರಾಶಿಯ ಗರಿಯಂತೆ ಚಾಚಿದೆ
ಹಸುರಾಗಿ ಹೊಮ್ಮುವ ಕೊಡಗೂರು

ಕೊಡಗರು, ಗೌಡರು, ಪರಭಾಷೆಯರು
ನೆಲೆಯನು ಕಂಡಿಹ ಕೊಡಗೂರು
ನಾನಾ ಮತ ಜಾತಿ ಒಂದಾಗಿ ಬಾಳುವ
ಶಾಂತಿಯ ಧಾಮವು ಕೊಡಗೂರು

ಹಿಂದಿನ ಕಾಲದಿ ವೀರರು ಆಳಿದ
ಶೂರರ ನಾಡಿದು ಕೊಡಗೂರು
ಧೀರರು, ವೀರರು ಜನರೆಲ್ಲ ಬಾಳಿದ
ಸಾಹಸ ತೋರಿದ ಕೊಡಗೂರು

ಸಿರಿಯಧಿ ದೇವತೆ ನಲಿಯುವ ನಾಡಿದು
ಸೌಭಾಗ್ಯದ ನಿಧಿ ಕೊಡಗೂರು
ಸೃಷ್ಟಿಯ ಚೆಲುವೆಲ್ಲ ಕಲೆತಿಲ್ಲಿ ಹರಿವುದು
ಋಷಿಗಳು ಮೆಚ್ಚಿದ ಕೊಡಗೂರು

ಕವೇರ ಅಗಸ್ತ್ಯರು ತಪಗೆಯ್ದರಂತಿಲ್ಲಿ
ಇದು ಭೂಸ್ವರ್ಗವು ಕೊಡಗೂರು
ಕಾವೇರಿ ಮಾತೆಯು ಜನಿಸಿದ ನಾಡಿದು
ಪಾವನ ಭೂಮಿಯು ಕೊಡಗೂರು

ಬೀಸುವ ತೆಂಕಣ ಗಾಳಿಗೆ ಇಲ್ಲಿಯ
ಗಿಡಮರ ನಲಿದಿದೆ ಕೊಡಗೂರು
ಇಂಪಿನ ಹಾಡಿಗೆ ತಾಳದ ನರ್ತನ
ಪಕ್ಷಿಗಳು ಪಾಡುವ ಕೊಡಗೂರು

ಗಗನದಿ ಓಡುವ ಮೋಡಗಳೆಲ್ಲವು
ತಂಗುವ ಊರಿದು ಕೊಡಗೂರು
ಗಂಗಮ್ಮ ಒಲಿದಿಲ್ಲಿ ಹರಿದಾಳೆ ನಾಡೆಲ್ಲ
ಒರತೆಗಳ್ ಚಿಮ್ಮುವ ಕೊಡಗೂರು

ಕೊಡಗಿನ ತಾಯಿಗೆ ನೊರೆನಗೆ ಮಲ್ಲಿಗೆ
ನದಿಗಳು ಮುಡಿಸುವ ಕೊಡಗೂರು
ಪರ್ವತರಾಯನು ಗಗನಾದೇವಿಗೆ
ಮುತ್ತನ್ನಿಕ್ಕುವ ಕೊಡಗೂರು

ಕೊಡಗಿನ ನಾಡೆಲ್ಲಾ ವನಸಿರಿ ಸಿಂಗಾರ
ರವಿ ಮರುಳಾಗಿಹ ಕೊಡಗೂರು
ಚಂದದ ಹೆಣ್ಣಿಗೆ ಪ್ರೇಮಾಲಿಂಗನ
ಸ್ನೇಹದ ಚುಂಬದ ಕೊಡಗೂರು

ಹುಣ್ಣಿಮೆಯ ದಿನ ಹಾಲಿನ ಬೆಳಕಿಗೆ
ಊರೆಲ್ಲ ನಲಿಯುವ ಕೊಡಗೂರು
ಕೃಷ್ಣ ಪಕ್ಷದ ಕಗ್ಗತ್ತಲೆಯಲಿ
ಕತ್ತಲೆ ಕಾರುವ ಕೊಡಗೂರು

ವಸಂತಕಾಲದಿ ನಾಡೆಲ್ಲಾ ಸಿಂಗಾರ
ಸುಂದರ ನಾಡಿದು ಕೊಡಗೂರು.
ಹಸುರಾದ ಸೀರೆಗೆ ಬೆಳ್ಳಿಯ ಕುಪ್ಪಸ
ಈ ಭೂಮಾತೆಯೆ ಕೊಡಗೂರು

ಅಂದದ ಹೆಣ್ಣಿಗೆ ಚಂದದ ತೊಡಿಗೆಯು
ಚೆಲುವಿನ ಧಾಮವು ಕೊಡಗೂರು
ಚೆಲುವೆಲ್ಲ ಮೈ ತಳೆದು ನಲಿಯುವ ನಾಡಲ್ಲಿ
ಜೀವನ ಪಾವನ ಕೊಡಗೂರು

ಕೊಡಗಿನ ನಾಡಿಗೆ ತಲೆಮಣಿಯಾಗಿ
ಮೆರೆದಿದೆ ಮಡಿಕೇರಿ ಕೊಡಗೂರು
ಮಡಿಕೇರಿಯಲ್ಲಿಹ ರಾಜಾ ಸೀಟಿಗೆ
ಸಗ್ಗವೆ ಇಳಿದಿದೆ ಕೊಡಗೂರು

ಭತ್ತ, ಯಾಲಕ್ಕಿ, ಕಿತ್ತಳೆ ಬೆಳೆಯುವ
ಕಾಫಿಗೆ ಹೆಸರಾದ ಕೊಡಗೂರು
ಕೊಡಗಿನ ನಾಡಲ್ಲಿ ಬನವೆಲ್ಲಾ ಸಿಂಗಾರ
ಜೇನನು ನೀಡುವ ಕೊಡಗೂರು.

ಭಾರತ ದೇಶಕ್ಕೆ ಯೋಧರ ನೀಡಿದ
ವೀರರ ನಾಡಿದು ಕೊಡಗೂರು
ಪ್ರಕೃತಿ ಸುಂದರ ಕೊಡಗೂರು
ತಂಪಿನ ಸೊಂಪಿನ ಕೊಡಗೂರು

ಇದು ಶಾಂತಿಧಾಮವು ಕೊಡಗೂರು
ಬನ್ನಿರಿ ನೋಡಿರಿ ಕೊಡಗೂರು
ಕನ್ನಡ ನಾಡಿನ ಚೆಲುವೂರು
ಸ್ವಾಗತ ನೀಡಿದೆ ಕೊಡಗೂರು
ಸುಸ್ವಾಗತ ನೀಡಿದೆ ಕೊಡಗೂರು

☆ **ಕುಯಿಂತೋಡು ದಾಮೋದರ,** ಸಂಪಾಜೆ

